# ಯಾಜುಷಶ್ರಾದ್ಧ ಪ್ರಯೋಗಃ

ಪರಿಷ್ಕಾರ :

ವೇ|| ಬ್ರ|| ಶ್ರೀ ವೆಂಕಟೇಶಶಾಸ್ತ್ರಿಗಳು

ಪ್ರಕಾಶಕರು :

ಎ.ಎಸ್. ಗಂಗಾಧರಶಾಸ್ತ್ರಿ

ಶ್ರೀ ವಿದ್ಯಾಗಣಪತಿ ಪ್ರಕಾಶನ

76, 3ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - 560 028.

ದೂರವಾಣಿ : 62 85 42

Internet : http://www.culturalindia.com/vidyaganapathi

*Yajusha Shraddha Prayogah*, a book in Kannada containing the Mantras & Kannada Explanation of the Vedic Rituals, published by A.N. Gangadhara Shastry, Chief Editor, Sri Vidyaganapathi Prakashana T.R.Nagar, Bangalore - 560 028. First Edition : 1998

ಪ್ರಥಮ ಮುದ್ರಣ : 1998

ಪ್ರತಿಗಳು : 2000

ಬೆಲೆ : ರೂ. 30/-

ಅಕ್ಷರ ಜೋಡಣೆ ಮತ್ತು ವಿನ್ಯಾಸ :
ಎಲ್.ಎಂ. ಗ್ರಾಫಿಕ್ಸ್,
1752/3, "ಅಕ್ಷಯ ಮ್ಯಾನ್‌ಷನ್",
ಮಲ್ಲೇಶ್ವರಂ ರೈಲ್ವೇ ನಿಲ್ದಾಣದ ಎದುರು,
ಮಾರುತಿ ಬಡಾವಣೆ, ಬೆಂಗಳೂರು - 560 021.
ದೂ : 332 1182

ಮುದ್ರಣ :
*ಸತ್ಯಶ್ರೀ ಪ್ರಿಂಟರ್ಸ್,*
ಚಾಮರಾಜಪೇಟೆ, ಬೆಂಗಳೂರು - 560 018.
ದೂ. : 62 57 36

# ಪ್ರಕಾಶಕರ ಮಾತು

"ಯಾಜುಷ ಶ್ರಾದ್ಧ ಪ್ರಯೋಗ" ಇಂದು ಬೆಳಕು ಕಾಣುತ್ತಿದೆ.

ಈ ಪುಸ್ತಕವು ಹಲವು ರೂಪದಲ್ಲಿ ಹಿಂದೆಯೇ ಬಂದದ್ದೇ. ಸಮರ್ಥರು, ಅನುಭವಿಗಳು ಬರೆದ ಆ ಹಲವು ಪುಸ್ತಕಗಳ ನೆರವಿನಿಂದ ಸಂಗ್ರಹಿತವಾದದ್ದು ಈ ಹೊತ್ತಿಗೆ. ಆದ್ದರಿಂದ ಇದರಲ್ಲಿನ ಗುಣಾಂಶದ ಕೀರ್ತಿಯು ಆ ಹಿರಿಯರಿಗೆ ಸಲ್ಲುತ್ತದೆ. ದೋಷಗಳು ನಮ್ಮವು. ಈಗಿನ ಅವಶ್ಯಕತೆಗೆ ಹೆಚ್ಚು ಅನುಕೂಲವಾಗಲೆಂದು ನಮಗೆ ತಿಳಿದ ಮಟ್ಟಿಗೆ ರೂಪಿಸಿದ್ದೇವೆ. ಮಹಾಜನರು ಮೆಚ್ಚಿದರೆ ಅದಕ್ಕಿಂತ ಬೇರೆಯ ಲಾಭವು ನಮಗೆ ಅನಗತ್ಯ.

ಈ ನಿಟ್ಟಿನಲ್ಲಿ ದಿ. ವೆಂಕಟರಾಮಾವಧಾನಿಗಳು - ದಿ. ಬನವತಿ ರಾಮಕೃಷ್ಣ ಶಾಸ್ತ್ರಿಗಳು, ಹಿರಿಯ ಜೀವಿ ಮೈಸೂರಿನ ಕಪನೀಪತಯ್ಯನವರೇ ಮುಂತಾದವರಿಗೆ ನಾವು ಆಭಾರಿಗಳು, ಕೃತಜ್ಞರೂ ಆಗಿದ್ದೇವೆ.

ಪ್ರಕೃತ ಪುಸ್ತಕಕ್ಕೆ ಮಾರ್ಗದರ್ಶನ ನೀಡಿ, ಪರಿಷ್ಕಾರವನ್ನೂ ಮಾಡಿರುವ ನಮ್ಮ ಗುರುಗಳಾದ ವೇ|| ಬ್ರ|| ಶ್ರೀ ಎಸ್. ವೆಂಕಟೇಶ ಶಾಸ್ತ್ರಿಗಳೂ ಹಾಗೂ ಅವರ ಪುತ್ರರಾದ ಶ್ರೀ ಶಿವಕುಮಾರ್‌ರವರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಈ ಪುಸ್ತಕಕ್ಕೆ ಮಹತ್ವಪೂರಿತವಾದ ಮುನ್ನುಡಿಯನ್ನು ಬರೆದುಕೊಟ್ಟು ಶುಭಾಶಂಸೆಗಳನ್ನು ಅನುಗ್ರಹಿಸಿ, ಇದಕ್ಕೆ ಹೆಚ್ಚಿನ ಮೆರುಗನ್ನು ನೀಡಿರುವ ಪೂಜ್ಯ ಶ್ರೀಶ್ರೀ ಶ್ರೀರಂಗಪ್ರಿಯ ಶ್ರೀಪಾದಸ್ವಾಮಿಗಳಿಗೆ ನಮ್ಮ ಭಕ್ತಿಪೂರ್ವಕವಾದ ಕೃತಜ್ಞತೆಗಳು.

ಅಲ್ಲದೆ ಈ ಪುಸ್ತಕದ ಮುದ್ರಣಕ್ಕೆಂದು ಸ್ವಪ್ರೇರಣೆಯಿಂದ ರೂ. 5,000/- ಗಳ ಸಹಾಯಧನವನ್ನು ಕೊಟ್ಟಿರುವ ಶ್ರೀ ಬಿ.ಎನ್.ವಿ. ಸುಬ್ರಹ್ಮಣ್ಯರವರಿಗೂ ಸಹ ಸಂಸ್ಥೆಯು ಆಭಾರಿಯಾಗಿರುತ್ತದೆ.

ಡಿ. ಟಿ. ಪಿ. - ಮುದ್ರಣ ಇತ್ಯಾದಿಗಳಿಂದ ಉಪಕರಿಸಿದ ಎಲ್ಲರಿಗೂ ನಮ್ಮ ವಂದನೆಗಳು ಸಲ್ಲುತ್ತದೆ. ಎಂದಿನಂತೆ ಈ ಪ್ರಕಟಣೆಯೂ ಜನರ ಪ್ರೀತಿಯನ್ನು ಗಳಿಸುವುದೆಂದು ನಂಬಿದ್ದೇವೆ.

30.5.98 — ಇತಿ ಶಮ್

ಬೆಂಗಳೂರು — ಪ್ರಕಾಶಕರು.

॥ ಶ್ರೀರಂಗ ಸದ್ಗುರವೇ ನಮಃ ॥

# ಮುನ್ನುಡಿ

ಭಾರತೀಯ ಧರ್ಮ-ಸಂಸ್ಕೃತಿಗಳಿಗೆ ಆಧಾರವಾಗಿ, ವಾಹಕವಾಗಿ, ವಾಗ್ರೂಪ ಶರೀರವಾಗಿರುವ ವೇದ, ಪುರಾಣ, ವ್ರತ, ಸ್ತೋತ್ರ, ಸಂಸ್ಕಾರಗಳ ಪ್ರಯೋಗ ಮುಂತಾದವುಗಳನ್ನು ಸುಂದರವೂ, ಪರಿಶುದ್ಧವೂ ಆದ ಅಕ್ಷರಗಳಲ್ಲಿ ಅಚ್ಚು ಹಾಕಿಸಿ, ಪ್ರಕಾಶನಕ್ಕೆ ತಂದು ಜನತೆಯ ಪ್ರೀತಿ, ವಿಶ್ವಾಸ, ಕೃತಜ್ಞತೆಗಳಿಗೆ ಪಾತ್ರವಾಗಿರುವ ಶ್ರೀವಿದ್ಯಾಗಣಪತಿ ಪ್ರಕಾಶನವು, ಅದೇ ಗ್ರಂಥಪರಂಪರೆಯಲ್ಲಿ ಈಗ ಸಮರ್ಪಣೆಮಾಡುತ್ತಿರುವ ಈ ಯಾಜುಷ ಶ್ರಾದ್ಧ ಪ್ರಯೋಗ ಗ್ರಂಥಕ್ಕೆ ಮಂಗಳಾಶಂಸನೆಗಳು.

ಶ್ರದ್ಧೆಯಿಂದ ಆಚರಿಸುವ ಕರ್ಮಕ್ಕೆ 'ಶ್ರಾದ್ಧ' ಎಂದು ಹೆಸರು. ಪ್ರೇತವನ್ನಾಗಲಿ ಪಿತೃದೇವತೆಗಳನ್ನಾಗಲಿ ಕುರಿತು ಶ್ರದ್ಧೆಯಿಂದ ವಿಧಿಪೂರ್ವಕವಾಗಿ, ಸರಿಯಾದ ದೇಶ-ಕಾಲ-ಪಾತ್ರಗಳಲ್ಲಿ ಸಮರ್ಪಿಸುವ ದಾನಹೋಮಾದಿ ಕರ್ಮಗಳನ್ನು 'ಶ್ರಾದ್ಧ' ಎಂದು ಪಾರಿಭಾಷಿಕವಾಗಿ ಕರೆಯುತ್ತಾರೆ.

"ಪ್ರೇತಂ ಪಿತ್ಯಂಶ್ಚ ನಿರ್ದಿಶ್ಯ ಭೋಜ್ಯಂ ಯತ್ ಪ್ರಿಯಮಾತ್ಮನಃ ।<br>ಶ್ರದ್ಧಯಾ ಕ್ರಿಯತೇ ಯತ್ ತು ತಚ್ಛ್ರಾದ್ಧಂ ಪರಿಕೀರ್ತಿತಮ್ ॥<br>ದೇಶೇ ಕಾಲೇ ಚ ಪಾತ್ರೇ ಚ ಶ್ರದ್ಧಯಾ ವಿಧಿನಾ ಚ ಯತ್ ।<br>ಪಿತೄನ್ ಉದ್ದಿಶ್ಯ ವಿಪ್ರೇಭ್ಯೋ ದತ್ತಂ ಶ್ರಾದ್ಧಮ್ ಉದಾಹೃತಮ್ ॥"

ಅವರನ್ನು ಉದ್ದೇಶಿಸಿ ಮಾಡುವ ಹೋಮ, ತರ್ಪಣ, ಪಿಂಡಪ್ರದಾನ, ಬ್ರಾಹ್ಮಣ ಭೋಜನ - ಇತ್ಯಾದಿಗಳೂ ಶ್ರಾದ್ಧಪ್ರಕಾರಗಳೇ.

ಶ್ರಾದ್ಧವು ಅತ್ಯಂತ ಪವಿತ್ರವಾದ ಕರ್ಮವೆಂದು ಪರಿಗಣಿತವಾಗಿ, ದೇವಕರ್ಮಕ್ಕಿಂತಲೂ ಮುಖ್ಯವಾದುದೆಂದು ಶಾಸ್ತ್ರಗಳು ಸಾರುತ್ತವೆ.

"ದೇವಕಾರ್ಯಾದಪಿ ಪರಂ ಪಿತೃಕಾರ್ಯಂ ಪ್ರಚಕ್ಷತೇ ।"

ಪಿತೃದೇವತೆಗಳು ದೇವತೆಗಳಿಗೂ ಪಿತೃಗಳಾಗಿರುವದರಿಂದ, ಅವರನ್ನು ಕುರಿತ ಕರ್ಮಗಳು ದೇವಕರ್ಮಗಳಿಗಿಂತಲೂ ಪ್ರಧಾನವೆಂದು, ಈ ಶ್ರಾದ್ಧಕರ್ಮವನ್ನು ಪ್ರಶಂಸೆ ಮಾಡಿದೆ. ಹಾಗೆಯೇ ಶ್ರಾದ್ಧಕರ್ಮವನ್ನು ಆಚರಿಸದೇ ಇದ್ದರೆ, ಮಹಾಹಾನಿಯುಂಟಾಗುತ್ತದೆಯೆಂದೂ ಶಾಸ್ತ್ರಗಳು ಘೋಷಿಸುತ್ತವೆ.

"ನ ತತ್ರ ವೀರಾ ಜಾಯಂತೇ ನಾರೋಗಾ ನ ಶತಾಯುಷಃ ।<br>ನ ಚ ಶ್ರೇಯೋಽಧಿಗಚ್ಛಂತಿ ಯತ್ರ ಶ್ರಾದ್ಧಂ ವಿವರ್ಜಿತಮ್ ॥"

ದೇಹವನ್ನು ತೊರೆದ ಬಂಧು, ಮಿತ್ರ ಅಥವಾ ಪ್ರೀತ್ಯಾದರಪಾತ್ರ - ಇವರನ್ನು ಕುರಿತು, ಪ್ರಶಂಸೆ, ಪ್ರಾರ್ಥನೆ, ಪೂಜೆ ಇತ್ಯಾದಿಗಳ ಮೂಲಕ, ಕೃತಜ್ಞತೆಯನ್ನು ಸಲ್ಲಿಸುವ ಪದ್ಧತಿಯು ನಾನಾ ಸಮಾಜಗಳಲ್ಲಿ ಕಂಡುಬರುತ್ತಿದೆ. ಇವುಗಳೂ ತಾತ್ತ್ವಿಕವಾಗಿ ಶ್ರಾದ್ಧದ

ರೂಪಗಳೇ ಆದರೂ, ಶ್ರಾದ್ಧಕರ್ಮವನ್ನು ವಿಚಾರಪೂರ್ವಕವಾಗಿ ವೈಜ್ಞಾನಿಕವಾಗಿ ಮತ್ತು ಪರಿಷ್ಕೃತ ರೂಪದಲ್ಲಿ ಆಚರಿಸುವ ಸಂಪ್ರದಾಯವು ಭಾರತೀಯರ ಪರಂಪರೆಯಲ್ಲಿ ಬಂದಿದೆ.

ಶ್ರಾದ್ಧವನ್ನು ಶ್ರದ್ಧೆಯಿಂದ ಮಾಡಬೇಕು - ಎಂದು ಶಾಸ್ತ್ರಗಳು ಹೇಳಿರುತ್ತವೆ. ಆದರೆ 'ಅಂಧಶ್ರದ್ಧೆಯಿಂದ ಮಾಡಬೇಕು' ಎಂದು ಅವು ಹೇಳಿರುವುದಿಲ್ಲ. ಮಾಡುವ ಯಾವುದೇ ಕೆಲಸವನ್ನು ವಿವೇಕದಿಂದ ವಿಚಾರಪೂರ್ವಕವಾಗಿ ಆಚರಿಸಬೇಕು ಎಂಬುದು ಜ್ಞಾನಿಗಳ ಉಪದೇಶ. 'ಶ್ರದ್ಧಯಾ, ವಿದ್ಯಯಾ, ಉಪನಿಷದಾ ...... ವೀರ್ಯವತ್ತರಂ ಭವತಿ' ಅಂತಹ ಆಚರಣೆಗೆ ಮೂಲಭೂತವಾಗಿರುವ ಆವಶ್ಯಕವಾಗಿರುವ ಮತ್ತು ಸತ್ಯಾರ್ಥದ ಅನುಭವದಲ್ಲಿ ಪರ್ಯವಸಾನ ಹೊಂದುವ ನಂಬಿಕೆಯನ್ನು ಮಾತ್ರವೇ ಶಾಸ್ತ್ರಗಳು ಶ್ರದ್ಧೆಯೆಂದು ಕರೆಯುತ್ತವೆ. - ಉದಾಹರಣೆಗೆ ಬೀಜಗಣಿತದಲ್ಲಿ, ಅಜ್ಞಾತವಾದುದನ್ನು 'x' ಎಂದು ಮೊದಲು ಇಟ್ಟುಕೊಂಡು, ಕೊನೆಗೆ ಸಮಸ್ಯೆಯನ್ನು ಸಂಪೂರ್ಣವಾಗಿ ಪರಿಹರಿಸಿಕೊಳ್ಳುವಂತೆ.

ಶ್ರಾದ್ಧದ ಆಚರಣೆಯನ್ನು ಕುರಿತು ಬಗೆಬಗೆಯಾದ ಸಂದೇಹ, ಆಕ್ಷೇಪಗಳನ್ನು ನೋಡುತ್ತೇವೆ.

(1) ದೇಹವೆಂಬುದೇ ಆತ್ಮ ; ಅದರ ಅಂತ್ಯದೊಡನೆ ಆತ್ಮದ ಅಂತ್ಯವೂ ಆಗಿಬಿಡುತ್ತದೆ. ಆದ್ದರಿಂದ ಅದನ್ನು ಕುರಿತು ಮಾಡುವ ಬ್ರಾಹ್ಮಣಸಂತರ್ಪಣೆ ಮುಂತಾದುವುಗಳು ವ್ಯರ್ಥ 'ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ' ?

(2) ದೇಹಾತಿರಿಕ್ತವಾದ ಆತ್ಮವು ಇದೆ - ಎಂದಿಟ್ಟುಕೊಂಡರೂ, ಅದು ದೂರದಲ್ಲಿರುವ ಲೋಕಾಂತರಕ್ಕೆ ಹೋಗಿಬಿಡುವುದರಿಂದ ಇಲ್ಲಿ ಆಚರಿಸುವ ಹೋಮ, ಭೋಜನ ಮುಂತಾದುವು ಅಲ್ಲಿಯವರೆಗೆ ಹೇಗೆ ತಲಪುತ್ತವೆ ? ಹೀಗೆ ಇಲ್ಲಿ ಊಟ ಮಾಡಿದರೆ ದೂರದೇಶದಲ್ಲಿರುವವನಿಗೆ ತೃಪ್ತಿಯುಂಟಾಗುವ ಪಕ್ಷಕ್ಕೆ, ಪ್ರಯಾಣಿಕರು ಕೈಯಲ್ಲಿ ಬುತ್ತಿಯನ್ನು ಏಕೆ ಒಯ್ಯಬೇಕು ?

(3) ಸತ್ತವರ ಜೀವವು ಇಲ್ಲಿ ಪುಣ್ಯವನ್ನು ಮಾಡಿದ್ದರೆ ಅದರ ಫಲವಾಗಿ ಪರಲೋಕದಲ್ಲಿ ಸ್ವರ್ಗಾದಿ ಸುಖಗಳನ್ನು ಅನುಭವಿಸುತ್ತಿರುತ್ತದೆ ; ಅಥವಾ ಜ್ಞಾನಬಲದಿಂದ ಮುಕ್ತಿಯನ್ನು ಹೊಂದಿರಬಹುದು. ಅದಕ್ಕೆ ಈ ಲೋಕದಲ್ಲಿರುವವರು ಕೊಡುವ ಭೋಜನ ತರ್ಪಣ ಮುಂತಾದುವುಗಳ ಆವಶ್ಯಕತೆಯಾದರೂ ಏನು ?

(4) ಸತ್ತವನು ಪಾಪಿಯಾಗಿದ್ದರೆ ನರಕದಲ್ಲಿ ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಆತನಿಗೆ ಈ ಲೋಕದಲ್ಲಿರುವವರು ಕೊಡುವ ಅನ್ನಪಾನಾದಿಗಳನ್ನು ಸ್ವೀಕರಿಸುವ ದೇಹೇಂದ್ರಿಯಗಳು, ಶಕ್ತಿಸಾಮರ್ಥ್ಯಗಳು ಮತ್ತು ಅವುಗಳಿಂದ ತೃಪ್ತಿಪಡೆಯಲು ಅನುಮತಿ ಇರುತ್ತವೆಯೇ ?

(5) ಸತ್ತುಹೋದ ಮನುಷ್ಯನು ಹುಲಿ, ಸಿಂಹ, ತೋಳ ಮುಂತಾದ ಜನ್ಮವನ್ನು ಹೊಂದಿದ್ದಲ್ಲಿ, ಆತನಿಗೆ ಬೇರೆಯವರು ಕೊಡುವ ಮಾನುಷಪ್ರಿಯವಾದ ವಡೆ -

ತಾಯಾದಿಗಳು ಸೇರುತ್ತವೆಯೇ ? / ದೊರೆಯುತ್ತವೆಯೇ ? ಪಕ್ಷಿ ಮನುಷ್ಯನಾಗಿಯೋ ಹುಟ್ಟಿದ್ದರೆ. ಅವನಿಗೆ ಅನ್ನ ಒಯ್ಯುವವರಾದರೂ ಯಾರು ? ಇಲ್ಲಿಂದಲ್ಲಿಗೆ ಸಾಗಣೆ ಹೇಗೆ ? ಒಬ್ಬನು ಊಟ ಮಾಡಿದರೆ ಮತ್ತೊಬ್ಬನಿಗೆ ತೃಪ್ತಿಯಾದೀತೆ ?

(6) ಶ್ರಾದ್ಧಮಾಡುವುದರಿಂದ ಅದನ್ನು ಆಚರಿಸಿದವನಿಗೆ ಒಳ್ಳೆಯದಾಗುವುದೋ ? ಅಥವಾ ಯಾರನ್ನು ಉದ್ದೇಶಿಸಿ ಶ್ರಾದ್ಧ ಮಾಡಲಾಗುತ್ತದೆಯೋ ಅವನಿಗೆ ಒಳ್ಳೆಯದಾಗುತ್ತದೆಯೋ ?

ಇವೇ ಮುಂತಾದ ನಾನಾ ಆಕ್ಷೇಪಗಳಿಗೆ ಸಂಕ್ಷಿಪ್ತವಾದ ಉತ್ತರವನ್ನು ಇಲ್ಲಿ ಕೊಡುತ್ತೇವೆ. ದೇಹಾತಿರಿಕ್ತವಾದ ಆತ್ಮವು ಉಂಟೆಂದು ಜ್ಞಾನಿಗಳು ಹೇಳುತ್ತಾರೆ. ಜೀವವು ದೇಹದಲ್ಲಿರುವಾಗ ಹೇಗಿರುತ್ತದೆ ? ; ದೇಹವನ್ನು ಬಿಟ್ಟ ಬಳಿಕ ಅದರ ಸ್ಥಿತಿಗತಿಗಳು ಹೇಗಿರುತ್ತವೆ ? - ಎಂಬುದಕ್ಕೆ ಆ ಜ್ಞಾನಿಗಳ ದರ್ಶನವೇ ಪ್ರಮಾಣ. ಜ್ಞಾನದೃಷ್ಟಿಯನ್ನು ಪಡೆದು ಅದನ್ನು ಅರಿತುಕೊಳ್ಳಬೇಕು. ಅಲ್ಲಿಯವರೆಗೂ ಆ ವಿಷಯದಲ್ಲಿ ಆಪ್ತರಾದ ಜ್ಞಾನಿಗಳ ಮತವೇ ನಮಗೆ ಪ್ರಮಾಣ. ಲೋಕವ್ಯವಹಾರದಲ್ಲಿಯೂ ಕೂಡ ನಮಗೆ ಅರ್ಥವಾಗದ ಇರುವ ಅಥವಾ ಮರೆಯಾದ ಇರುವ ವಿಷಯಗಳನ್ನು ಆಪ್ತರ ಮಾತಿನಿಂದಲೇ ನಾವು ಅನೇಕ ಸನ್ನಿವೇಶಗಳಲ್ಲಿ ಅರಿಯುತ್ತೇವಷ್ಟೆ !

ದೇಹಾತಿರಿಕ್ತವಾದ ಆತ್ಮನಿಲ್ಲ : ದೇಹವೇ ಆತ್ಮ - ಎಂದಿಟ್ಟುಕೊಂಡರೂ ಶ್ರಾದ್ಧ ಕರ್ಮವು ವ್ಯರ್ಥವಲ್ಲ. ಏಕೆಂದರೆ ಅದರಿಂದ ಸತ್ತುಹೋದ ಬಂಧುಮಿತ್ರಾದಿಗಳ ಸ್ಮರಣೆ ನಮಗೆ ಉಂಟಾಗಿ ಮನಸ್ಸಿಗೆ ಸಂತೋಷವುಂಟಾಗುತ್ತದೆ. ಇತರರಿಗೆ ಭೋಜನ - ದಕ್ಷಿಣೆಗಳನ್ನು ಕೊಡುವುದರಿಂದ ಪದಾರ್ಥಗಳ ಸದ್ವಿನಿಯೋಗವಾಗುತ್ತದೆ.

ಶಬ್ದವನ್ನೂ ರೂಪವನ್ನೂ ಅತ್ಯಂತ ದೂರದವರೆಗೂ (ಬಾಹ್ಯಾಕಾಶ ಗ್ರಹಾಂತರಗಳ ವರೆಗೂ) ಯೋಗ್ಯವಾದ ಮಾಧ್ಯಮಗಳ ಮೂಲಕ ತಲುಪಿಸುವ ವಿಜ್ಞಾನವನ್ನು ಇಂದು ನಾವು ಕಂಡೇ ಇದ್ದೇವೆ. ಹಾಗೆಯೇ ಯೋಗ್ಯವಾದ ಶಕ್ತಿಯನ್ನು ದ್ವಾರವಾಗಿಟ್ಟುಕೊಂಡು, ಇಲ್ಲಿ ಸಮರ್ಪಿಸುವ ಪದಾರ್ಥಗಳ ಸಾರವು ಲೋಕಾಂತರದವರೆಗೂ ತಕ್ಕ ವಿಜ್ಞಾನವಿದ್ದಲ್ಲಿ ಏಕೆ ತಲುಪಿಸಲ್ಪಡಬಾರದು ? ಇಲ್ಲಿ ಸಮರ್ಪಿಸಿದ ಭಕ್ಷ್ಯ ಭೋಜ್ಯಾದಿಗಳು. ಭೋಜನ ಮಾಡುವ ಜ್ಞಾನಿಗಳ ಶಕ್ತಿಯಿಂದ ಮತ್ತು ಮಂತ್ರತಂತ್ರಾದಿಗಳ ಶಕ್ತಿಯಿಂದ ಮತ್ತು ಕರ್ತೃವಿನ ಶ್ರದ್ಧಾಬಲದಿಂದ 'ಸ್ವಧಾ' ಎಂಬ ಹೊಸ ರೂಪವನ್ನು ತಾಳಿ, ಲೋಕಾಂತರದಲ್ಲಿರುವ ಜೀವಗಳಿಗೆ ಭೋಗ್ಯವಾಗುತ್ತದೆ.

ಗತಿಸಿದ ಜೀವವು ಮುಕ್ತಾತ್ಮನೇ ಆಗಿದ್ದರೆ ಅಥವಾ ಸ್ವರ್ಗಸುಖವನ್ನನುಭವಿಸುತ್ತಿದ್ದರೆ ಆತನಿಗೆ ಈ ಲೋಕದಲ್ಲಿ ಸಮರ್ಪಿಸಲಾಗುವ ಯಾವುದೇ ಭೋಜ್ಯವಸ್ತುವಿನ ಆವಶ್ಯಕತೆಯಿರುವುದಿಲ್ಲ.

"ನ ಹಿ ತೇನ ಪಥಾ ತನುತ್ಯಜಃ ತನಯಾವರ್ಜಿತಪಿಂಡಕಾಂಕ್ಷಿಣಃ ।"

ಆದರೆ ಅವರನ್ನು ಕುರಿತು ಮಾಡುವ ಶ್ರಾದ್ಧವು, ದೇವತಾ ಪೂಜೆಯ ರೂಪವನ್ನು ತಾಳಿ, ಕರ್ತೃವಿಗೆ ದೇವತಾಪೂಜೆಯ ಫಲವಾದ ಪುರುಷಾರ್ಥಗಳನ್ನು ಕೊಡುತ್ತದೆ.

ಸತ್ತವನು ಪಾಪಿಯಾಗಿದ್ದು ನರಕಾದಿಗಳಲ್ಲಿದ್ದರೆ, ಅವನನ್ನು ಕುರಿತು ಮಾಡುವ ಶ್ರಾದ್ಧದಿಂದ ಆತನಿಗೆ ದುಃಖಶಮನವಾಗಿ ಸುಖಾನುಭವವುಂಟಾಗುತ್ತದೆ. ಶ್ರಾದ್ಧದಲ್ಲಿ ನಿಮಂತ್ರಿತನಾದ ಜ್ಞಾನಿಯ ಅನುಗ್ರಹ ಆಶೀರ್ವಾದಗಳಿಂದಲೂ ಸಾನ್ನಿಧ್ಯದಿಂದಲೂ ದುಃಖ ಪರಿಹಾರ ಮತ್ತು ಸುಖಪ್ರಾಪ್ತಿಗಳು ಉಂಟಾಗುತ್ತವೆ. ಶ್ರಾದ್ಧದಲ್ಲಿ ಜ್ಞಾನಿಯಾದವನನ್ನೂ ಸದಾಚಾರಸಂಪನ್ನನಾದವನನ್ನೂ ಆತ್ಮಗುಣಸಂಪನ್ನನನ್ನೂ ನಿಮಂತ್ರಿಸಬೇಕೆಂದು ಶಾಸ್ತ್ರಗಳು ಹೇಳುತ್ತವೆ. ಜಿತೇಂದ್ರಿಯನಾದವನು ಕೇವಲ ಗಾಯತ್ರೀಜಪನಿರತನಾಗಿದ್ದರೂ ಆತನು ಶ್ರಾದ್ಧ ನಿಮಂತ್ರಣಕ್ಕೆ ಯೋಗ್ಯನು.

"ಗಾಯತ್ರೀಮಾತ್ರಸಾರೋಽಪಿ ವರಂ ವಿಪ್ರೋ ಜಿತೇಂದ್ರಿಯಃ ।"

ಸತ್ತ ಮನುಷ್ಯನು ಯಾವುದಾದರೂ ಪ್ರಾಣಿಯಾಗಿ ಹುಟ್ಟಿದ್ದರೂ, ಆತನನ್ನು ಕುರಿತು ಮಾಡುವ ಶ್ರಾದ್ಧವು ಸಫಲವಾಗುವುದು. ಶ್ರಾದ್ಧದಲ್ಲಿ ಪಿತೃದೇವತೆಗಳನ್ನು ಪೂಜಿಸ ಲಾಗುತ್ತದೆ. ಆ ಪೂಜೆಯಿಂದ ಸಂತುಷ್ಟರಾದ ವಸು-ರುದ್ರಾದಿ ಪಿತೃದೇವತೆಗಳು ತಮ್ಮ ಜ್ಞಾನಶಕ್ತಿಗಳಿಂದ, ಇಲ್ಲಿ ಬಡಿಸಿದ ಭೋಜ್ಯಪದಾರ್ಥವು ಆ ಪ್ರಾಣಿಗೆ ಯೋಗ್ಯವಾದ ಆಹಾರವಾಗಿ ಸಂತೃಪ್ತಿಯುಂಟಾಗುವಂತೆ ಮಾಡುತ್ತಾರೆ. ತೆಗೆದುಕೊಳ್ಳುವ ಆಹಾರವು ಮುಖ್ಯವಲ್ಲ, ಅದರಿಂದುಂಟಾಗುವ ತೃಪ್ತಿಯು ಮುಖ್ಯವಾದುದು. ಅದನ್ನುಂಟುಮಾಡುವ ಶಕ್ತಿಯು ಪಿತೃದೇವತೆಗಳಿಗುಂಟು ಮತ್ತು ಎಲ್ಲ ದೇವತೆಗಳಿಗೂ ಅಂತರ್ಯಾಮಿಯಾಗಿರುವ ಪರಮಾತ್ಮನಿಗೆ ಆ ಶಕ್ತಿ ಇದ್ದೇ ಇರುತ್ತದೆ.

ಇಲ್ಲಿ ಅಂಚೆಪೆಟ್ಟಿಗೆಯಲ್ಲಿ ಹಾಕಿದ ಪತ್ರವು ಅತಿದೂರದಲ್ಲಿರುವವನಿಗೆ ತಲುಪು ವುದನ್ನು ನೋಡುತ್ತೇವೆ. ಅಂಚೆ ವ್ಯವಸ್ಥೆಯು ಸರಿಯಾಗಿದ್ದರೆ, ಸತ್ಯವಾಗಿಯೂ ಇದು ಸಾಧ್ಯವಾಗುತ್ತದೆ. ಅಂಚೆ ತಲುಪಿದ್ದಕ್ಕೆ ಪ್ರಮಾಣದ ಲೇಖನವೂ ಬರುತ್ತದೆ. ಪ್ರಕೃತವಾದ ಶ್ರಾದ್ಧದಲ್ಲಿ ಅದು ವಿಧಿಪೂರ್ವಕವಾಗಿ ನಡೆದಿದ್ದರೆ, ಅಂತೆಯೇ ಇಷ್ಟಾರ್ಥವೂ ಸಿದ್ಧಿಸು ತ್ತದೆ. ಇಲ್ಲಿ ಭಗವಂತನ ಮತ್ತು ಆತನ ವಿಭೂತಿಗಳಾದ ಪಿತೃದೇವತೆಗಳ ವ್ಯವಸ್ಥೆಯಿಂದ ಉದ್ದಿಷ್ಟಕಾರ್ಯವು ಸಿದ್ಧಿಸುತ್ತದೆ. ಜ್ಞಾನದೃಷ್ಟಿಯನ್ನು ಪಡೆದರೆ ಪದಾರ್ಥವು ಸಂಬಂಧ ಪಟ್ಟವರನ್ನು ತಲುಪಿದ್ದಕ್ಕೆ, ಪ್ರಮಾಣದ ಗುರುತೂ ತಿಳಿಯುತ್ತದೆ.

ಶ್ರಾದ್ಧವನ್ನು ಮಾಡುವುದರಿಂದ ಯಾರನ್ನು ಕುರಿತು ಅದನ್ನು ಆಚರಿಸಲಾಗು ತ್ತದೆಯೋ ಆತನಿಗೆ ಸುಖವುಂಟಾಗುವುದು. ಆತನಿಗೆ ಆ ಸುಖದ ಆವಶ್ಯಕತೆಯಿಲ್ಲದಿದ್ದರೂ, ಶ್ರಾದ್ಧ ಮಾಡಿದವನಿಗೆ ಸುಕೃತವುಂಟಾಗುತ್ತದೆಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಇದು ಪಿತೃಕರ್ಮದ ವಿಷಯವಾಯಿತು. ಪ್ರೇತಕರ್ಮದಲ್ಲಾದರೋ ಗತಿಸಿದ ಜೀವನಿಗೆ ಶೀಘ್ರದಲ್ಲೇ ಪ್ರೇತವೆಂಬ ಅನಿಷ್ಟವಾದ ರೂಪವು ನಿವೃತ್ತಿಯಾಗಿ ಆತನಿಗೆ ಕರ್ಮಾನು ಗುಣವಾದ ಗತಿಯು ಲಭಿಸುವುದಕ್ಕೆ ಸಹಾಯವಾಗುವುದು.

ಹೀಗೆ ವಿವೇಚನೆ ಮಾಡಿ ನೋಡಿದಾಗ ಶ್ರಾದ್ಧಕರ್ಮವನ್ನು ಅದಕ್ಕೆ ಅಧಿಕಾರಿ ಯಾದವನು ಅವಶ್ಯವಾಗಿ ಆಚರಿಸಬೇಕು - ಎಂಬುದು ವಿವೇಕಿಗಳಿಗೆ ತಿಳಿಯುತ್ತದೆ.

ಶ್ರಾದ್ಧದಲ್ಲಿ ಪಾರ್ವಣಶ್ರಾದ್ಧ / ಸಂಕಲ್ಪಶ್ರಾದ್ಧ / ಆಮಶ್ರಾದ್ಧ / ಹಿರಣ್ಯಶ್ರಾದ್ಧ / ಗೋಗ್ರಾಸ ಮುಂತಾದ ನಾನಾ ಕಲ್ಪಗಳಿರುತ್ತವೆ. ಇವುಗಳಲ್ಲಿ ಮುಖ್ಯವಾದ ಕಲ್ಪವನ್ನು ಆಚರಿಸಲು ಸಾಧ್ಯವಿಲ್ಲದೇ ಇದ್ದಾಗ, ಅನುಕಲ್ಪವನ್ನಾದರೂ ಆಚರಿಸಲೇಬೇಕು. ಆಪತ್ಕಾಲದಲ್ಲಿ ಅನುಕಲ್ಪವನ್ನು ಆಚರಿಸಿದರೂ ಮುಖ್ಯ ಕಲ್ಪದ ಆಚರಣೆಯ ಫಲವೇ ಉಂಟಾಗುತ್ತದೆ. ಆದರೆ ಶ್ರಾದ್ಧದಲ್ಲಿ ಕಾರ್ಪಣ್ಯವನ್ನು ಮಾಡಬಾರದು, ಅತಿ ವೈಭವವನ್ನು ಆಚರಿಸಿ, ಶ್ರಾದ್ಧದ ಶುದ್ಧಿಯನ್ನು ಕಡಿಮೆ ಮಾಡಲೂ ಬಾರದು.

ಶ್ರಾದ್ಧದಲ್ಲಿ ಪೂಜೆ ಮಾಡುವುದು ಮುಖ್ಯವಾಗಿ ಪರಮಾತ್ಮನನ್ನು ಮತ್ತು ಅವನ ವಿಭೂತಿಗಳಾದ ವಸು-ರುದ್ರ-ಆದಿತ್ಯ ಮುಂತಾದ ಪಿತೃಗಳನ್ನು. ಅವರು ಸಂತುಷ್ಟರಾದರೆ, ಅವರು ಸಮಸ್ತ ಪುರುಷಾರ್ಥಗಳನ್ನೂ ಕಾಲವಿಶೇಷದಲ್ಲಿ ದಯಪಾಲಿಸುತ್ತಾರೆ.

''ಶ್ರಾದ್ಧಕೃತ್ ಸತ್ಯವಾದೀ ಚ ಗೃಹಸ್ಥೋಽಪಿ ವಿಮುಚ್ಯತೇ ॥'

''ಸತ್ಯಸಂಧನಾಗಿದ್ದು ವಿಧಿಪೂರ್ವಕವಾಗಿ ಶ್ರಾದ್ಧವನ್ನು ಆಚರಿಸಿದರೆ, ಗೃಹಸ್ಥನೂ ಕೂಡ ಮುಕ್ತಿಯನ್ನು ಪಡೆಯುತ್ತಾನೆ''.

ಶ್ರಾದ್ಧದಿಂದ ಸಂತುಷ್ಟರಾದ ಶ್ರಾದ್ಧದೇವತೆಗಳಾದ ವಸು-ರುದ್ರಾದಿಗಳು ಮನುಷ್ಯರ ಪಿತೃಗಳನ್ನು ಸಂತೋಷಪಡಿಸುತ್ತಾರೆ ಮತ್ತು ಶ್ರಾದ್ಧಕರ್ತೃವಿಗೆ ಆಯುಸ್ಸು, ಪ್ರಜ್ಞೆ, ಧನ, ವಿದ್ಯೆ, ಸ್ವರ್ಗ ಮತ್ತು ಮೋಕ್ಷಗಳನ್ನು ದಯಪಾಲಿಸುತ್ತಾರೆ. ನೇರವಾಗಿ ಮೋಕ್ಷವನ್ನು ಕೊಡದಿದ್ದರೂ ಚಿತ್ತಶುದ್ಧಿಯನ್ನುಂಟುಮಾಡಿ ತನ್ಮೂಲಕ ಮೋಕ್ಷಕ್ಕೆ ಕಾರಣರಾಗುತ್ತಾರೆ. ಪಿತೃಗಳನ್ನು ಪೂಜೆಮಾಡುವವರು ವಾಸ್ತವವಾಗಿ ಅವರ ದ್ವಾರದಿಂದ ಸರ್ವಭೂತಾಂತರಾತ್ಮನಾದ ಪರಮಾತ್ಮನನ್ನೇ ಪೂಜಿಸುತ್ತಾರೆ.

ವಸುರುದ್ರಾದಿತಿಸುತಾಃ ಪಿತರಃ ಶ್ರಾದ್ಧದೇವತಾಃ ।
ಪ್ರೀಣಯಂತಿ ಮನುಷ್ಯಾಣಾಂ ಪಿತೄನ್ ಶ್ರಾದ್ಧೇನ ತರ್ಪಿತಾಃ ॥
ಆಯುಃ ಪ್ರಜ್ಞಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ ।
ಪ್ರಯಚ್ಛಂತಿ ತಥಾ ರಾಜ್ಯಂ ಪ್ರೀತಾ ನೄಣಾಂ ಪಿತಾಮಹಾಃ ॥

ಧರ್ಮವಿದ್ಯಾಪ್ರಕಾಶನದಲ್ಲಿ ಬದ್ಧಾದರರಾಗಿರುವ ವೇ॥ ಬ್ರ॥ ಶ್ರೀ॥ ಗಂಗಾಧರ ಶಾಸ್ತ್ರಿಗಳು ಮಂತ್ರಪ್ರಯೋಗಗಳಲ್ಲಿ ನಿಪುಣರಾದ ವಿದ್ವಾಂಸರ ಸಹಾಯದಿಂದ ಈ ಯಾಜುಷಶ್ರಾದ್ಧಗ್ರಂಥವನ್ನು ಪ್ರಕಾಶಪಡಿಸಿದ್ದಾರೆ. ತಂತ್ರಪ್ರಯೋಗಗಳಿಗೆ ಕನ್ನಡಾನುವಾದವನ್ನು ಕೊಟ್ಟಿರುವುದು ತುಂಬಾ ಉಪಯುಕ್ತವಾಗಿದೆ. ಶ್ರೀ ವಿದ್ಯಾಗಣಪತಿ ಪ್ರಕಾಶನ ಸಮಿತಿಯಿಂದ ಇಂತಹ ಇನ್ನೂ ಉತ್ತಮ ಗ್ರಂಥಗಳು ರಚಿತವಾಗಲಿ ಎಂದು ನಾರಾಯಣ ಸ್ಮರಣೆ ಮಾಡುತ್ತೇವೆ.

ಇತಿ ನಾರಾಯಣ ಸ್ಮೃತಯಃ

॥ ಶ್ರೀಶ್ರೀಶ್ರೀ ರಂಗಪ್ರಿಯ ಶ್ರೀಪಾದ ಶ್ರೀಶ್ರೀಃ ॥

ಅಷ್ಟಾಂಗಯೋಗವಿಜ್ಞಾನಮಂದಿರಮ್

# ಪುನಸ್ಸಂಧಾನಮ್

ಆಚಮ್ಯ ।

ಪೂರ್ವಾಭಿಮುಖವಾಗಿ ಕುಳಿತು 3 ಸಲ ಆಚಮನ ಮಾಡುವುದು.

ದರ್ಭೇಷ್ವಾಸೀನಃ ।

ಮೂರು ಅಥವಾ ಹೆಚ್ಚು ಉದ್ದವಾದ ದರ್ಭೆಗಳನ್ನು ಮಣೆಯ ಕೆಳಕ್ಕೆ ಉತ್ತರಾಗ್ರವಾಗಿ ಹಾಕಿಕೊಂಡು ಮಣೆಯ ಮೇಲೆ ಕುಳಿತುಕೊಳ್ಳುವುದು.

ಋಧ್ಯಾಸ್ಮ ಹವ್ಯೈರ್ನಮಸೋಪಸದ್ಯ । ಮಿತ್ರಂ ದೇವಂ ಮಿತ್ರಧೇಯಂ ನೋ ಅಸ್ತು । ಅನೂರಾಧಾನ್ ಹವಿಷಾ ವರ್ಧಯಂತಃ । ಶತಂ ಜೀವೇಮ ಶರದಸ್ಸವೀರಾಃ ॥

ಈ ಮಂತ್ರವನ್ನು ಹೇಳುತ್ತಾ ಆಶೀರ್ವಾದ ಪೂರ್ವಕವಾಗಿ ಪವಿತ್ರವನ್ನು ಕರ್ತೃವಿಗೆ ನೀಡುವುದು.

ಪವಿತ್ರಂ ಧೃತ್ವಾ । (2 ದರ್ಭೆ ಪವಿತ್ರ)

ಎರಡು ಉದ್ದವಾದ ದರ್ಭೆಗಳಿಂದ ಕಟ್ಟಿದ ಪವಿತ್ರವನ್ನು ಉಂಗುರದ ಬೆರಳಿಗೆ ಧರಿಸಿಕೊಳ್ಳುವುದು. ಯಜ್ಞೇಶ್ವರನ ಪೂಜೆಗೆ ಪಂಚಪಾತ್ರೆಯಲ್ಲಿ ನೀರು ತುಂಬಿ, ಉದ್ಧರಣೆ ಸಮೇತ ಇಟ್ಟುಕೊಳ್ಳುವುದು.

ಪ್ರಾಣಾನಾಯಮ್ಯ ।

ಪ್ರಾಣಾಯಾಮ ಮಾಡುವುದು (ಪೂರ್ವಾಭಿಮುಖವಾಗಿ ಕುಳಿತು)

ದೈವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಃ । ಓಂ ಭೂಃ ಓಂ ಭುವಃ ಓಗ್ಂ ಸುವಃ ಓಂ ಮಹಃ ಓಂ ಜನಃ ಓಂ ತಪಃ ಓಗ್ಂ ಸತ್ಯಮ್ ॥

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಸ್ಸುವರೋಮ್ ॥

ಸಂಕಲ್ಪಮ್ (ಸಂಕಲ್ಪ) : ಶುಭತಿಥೌ, ಶೋಭನೇ ಮುಹೂರ್ತೇ, ಅದ್ಯ ಬ್ರಹ್ಮಣಃ, ದ್ವಿತೀಯಪರಾರ್ಧೇ, ಶ್ವೇತವರಾಹಕಲ್ಪೇ, ವೈವಸ್ವತಮನ್ವಂತರೇ, ಕಲಿಯುಗೇ, ಪ್ರಥಮಪಾದೇ, ಜಂಬೂದ್ವೀಪೇ, ಭರತವರ್ಷೇ, ಭರತಖಂಡೇ, ಅಸ್ಮಿನ್ ವರ್ತಮಾನೇ,

ವ್ಯಾವಹಾರಿಕೇ, ಚಾಂದ್ರಮಾನೇನ, ಪ್ರಭವಾದಿ ಷಷ್ಟಿ ಸಂವತ್ಸರಾಣಾಂ ಮಧ್ಯೇ ಶ್ರೀ ......... ನಾಮ ಸಂವತ್ಸರೇ, ......... ಅಯನೇ, ......... ಋತೌ, ......... ಮಾಸೇ, ......... ಪಕ್ಷೇ, ......... ತಿಥೌ, ......... ವಾಸರಯುಕ್ತಾಯಾಂ, ಶುಭನಕ್ಷತ್ರ, ಶುಭಯೋಗ, ಶುಭಕರಣ, ಏವಂಗುಣ, ವಿಶೇಷಣ, ವಿಶಿಷ್ಟಾಯಾಂ, ಶುಭತಿಥೌ, ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಮಮ ವಿಚ್ಛಿನ್ನಸ್ಯ ಔಪಾಸನಾಗ್ನೇಃ - ಪುನಸ್ಸಂಧಾನಂ ಕರಿಷ್ಯೇ* -

ಇತಿ ಸಂಕಲ್ಪ್ಯ ।




ಚಿತ್ರ 1. ಚತುಷ್ಪಾತ್ರ ಪ್ರಯೋಗ

ಉಪಲಿಪ್ಯ । ಶುಚೌ ದೇಶೇ ಸ್ಥಂಡಿಲಂ ಚತುರಶ್ರಂ ಕೃತ್ವಾ । ತದಂಗ ಸ್ಥಂಡಿಲೋಲ್ಲೇಖನಾದ್ಯಗ್ನಿ ಪ್ರತಿಷ್ಠಾಪನಂ ಕರಿಷ್ಯೇ ।

ಗೋಮಯದಿಂದ ಸಾರಿಸಿದ ಶುಚಿಯಾದ ಸ್ಥಳದಲ್ಲಿ ಇಟ್ಟಿಗೆ ಮರಳುಗಳಿಂದ ಚೌಕವಾಗಿ ಮೇಲ್ಕಂಡಂತೆ ವೇದಿಕೆ ಕಟ್ಟುವುದು. ಅನಂತರ ಈ ಕೆಳಗಿನ ವಿವರಗಳಂತೆ ಗೆರೆಗಳನ್ನು ಎಳೆದು ಅಗ್ನಿಪ್ರತಿಷ್ಠೆ ಮಾಡುವುದು.

ಅಂಗುಷ್ಠ ಅನಾಮಿಕಾಭ್ಯಾಂ ಸಂಗೃಹೀತೇನ ಶಕಲೇನ ಸ್ಥಂಡಿಲಸ್ಯೋಪರಿ ದಕ್ಷಿಣಾರಂಭಂ ಪ್ರಾಚೀಃ - ಪಶ್ಚಿಮಾರಂಭಂ ಉದೀಚೀಃ - ತಿಸ್ರಃ ತಿಸ್ರೋ ರೇಖಾ ಲಿಖಿತ್ವಾ ।

ಎರಡು ಉದ್ದವಾದ ದರ್ಭೆಗಳನ್ನು ಅಂದರೆ 'ಶಕಲ'ವನ್ನು ತೆಗೆದುಕೊಂಡು ಅವನ್ನು

* ಪಾಣಿಗ್ರಹಣ ಕಾಲದಲ್ಲಿ ನಿತ್ಯಔಪಾಸನಗಾಗಿ ಪ್ರತಿಷ್ಠಿತವಾಗುವ ಅಗ್ನಿಯು, ಆಮರಣಾಂತವಾಗಿ ಇರಬೇಕಾದುದು ವಿಧಿ. ಆದರೆ ದೇಶ, ಕಾಲ, ವರ್ತಮಾನಗಳಿಂದ ಅದು ಸಾಗದೆ, ನಿತ್ಯ ಔಪಾಸನಗಳು ನಡೆಯದೆ, ಆ ಅಗ್ನಿಯು ವಿಚ್ಛಿನ್ನವಾಗಿರುತ್ತದೆ. ಹೀಗೆ ವಿಚ್ಛಿನ್ನವಾದ ಅಗ್ನಿಯನ್ನು ಪುನಸ್ಸಂಧಾನ ಮಾಡಿಕೊಳ್ಳುತ್ತೇನೆಂದು ಸಂಕಲ್ಪ ಮಾಡಿಕೊಳ್ಳುವುದು. ಈ ರೀತಿ ಪುನಸ್ಸಂಧಾನವಾದ ಅಗ್ನಿಯಲ್ಲಿ ಪ್ರಾತಃಕಾಲದ ಔಪಾಸನೆಯನ್ನು ಮಾಡಬೇಕು.

ಮಧ್ಯದಲ್ಲಿ ಮಡಿಸಿ - ಅಂಗುಷ್ಠ ಮತ್ತು ಅನಾಮಿಕೆಗಳಿಂದ ಹಿಡಿದುಕೊಂಡು ಅದರಿಂದ ಮರಳು ಹರಡಿರುವ ಚೌಕವಾದ ಸ್ಥಂಡಿಲದ (ವೇದಿಕೆ) ಮೇಲೆ ಮೇಲ್ಕಂಡ ಚಿತ್ರದಂತೆ :-

ದಕ್ಷಿಣದಿಂದ ಪ್ರಾರಂಭಿಸಿ :- ಪಶ್ಚಿಮದಿಂದ ಪೂರ್ವಕ್ಕೆ ಮೂರು ಗೆರೆಗಳನ್ನೂ

ಪಶ್ಚಿಮದಿಂದ ಪ್ರಾರಂಭಿಸಿ :- ದಕ್ಷಿಣದಿಂದ ಉತ್ತರಕ್ಕೆ ಮೂರು ಗೆರೆಗಳನ್ನೂ ಎಳೆಯುವುದು.

ತತ್ರ ತು ವಿನ್ಯಸ್ಯ ।

ಆಮೇಲೆ ಆ ದರ್ಭೆಗಳನ್ನು ಸ್ಥಂಡಿಲದ ಮೇಲೆ ಇಡುವುದು.

ಅವೋಕ್ಷಣ ತೋಯಮಾನೀಯ ।

ಸ್ಥಂಡಿಲ (ವೇದಿಕೆ) ಪ್ರೋಕ್ಷಣೆಗಾಗಿ ಒಂದು ದೊನ್ನೆಯಲ್ಲಿ ನೀರು ತೆಗೆದುಕೊಳ್ಳುವುದು. ಇದಕ್ಕೆ ಅವೋಕ್ಷಣ ತೋಯ ಎಂದು ಹೆಸರು.

ಅದ್ಭಿರವೋಕ್ಷ್ಯ ।

ಈ ನೀರಿನಿಂದ ದರ್ಭೆಗಳಿಗೆ ಪ್ರೋಕ್ಷಿಸಿ.

ಶಕಲಮಾಗ್ನೇಯ್ಯಾಂ - ನಿರಸ್ಯ ।

ಆ ಎರಡು ದರ್ಭೆಗಳನ್ನೂ ಆಗ್ನೇಯ ದಿಕ್ಕಿಗೆ ಹಾಕಿಬಿಡುವುದು.

ಅವೋಕ್ಷಣ ಶೇಷ ತೋಯಂ ಅಗ್ನೇಃ ಪ್ರಾಗ್ಭಿಗ್ಭಾಗೇ ನಿಕ್ಷಿಪ್ಯ ।

ದರ್ಭೆಗಳಿಗೆ ಪ್ರೋಕ್ಷಿಸಿ ಉಳಿದ ನೀರನ್ನು ಆ ದೊನ್ನೆಯ ಸಮೇತ ಅಗ್ನಿಯ ಪೂರ್ವ ಭಾಗದಲ್ಲಿ ಇಡುವುದು.

ಅಪ ಉಪಸ್ಪೃಶ್ಯ ।

ಕೈ ತೊಳೆದುಕೊಳ್ಳುವುದು.

ಭೂರ್ಭುವಸ್ಸುವರೋಂ ಇತ್ಯಗ್ನಿಂ ಪ್ರತಿಷ್ಠಾಪ್ಯ ।

ಎರಡು ಹಿತ್ತಾಳೆ ತಟ್ಟೆಯಲ್ಲಿ ಇಬ್ಬರು ಮುತ್ತೈದೆಯರಿಂದ ಅಗ್ನಿಯನ್ನು ತರಿಸಿಕೊಂಡು ಸ್ಥಂಡಿಲದಲ್ಲಿ "ಓಂ ಭೂರ್ಭುವಸ್ಸುವರೋಂ ಇತ್ಯಗ್ನಿಂ ಪ್ರತಿಷ್ಠಾಪ್ಯ" ಎಂದು ಹೇಳಿ ಅಗ್ನಿಯನ್ನು ಪ್ರತಿಷ್ಠೆ ಮಾಡಿ, ಚಕ್ಕೆ, ಬೆರಣಿಗಳಿಂದ ಆ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವುದು.

(ಸಹಾಯಕ್ಕೆ ಬೀಸಣಿಗೆಯನ್ನಾಗಲೀ, ಊದುಗೊಳವೆಯನ್ನಾಗಲೀ ಉಪಯೋಗಿಸುವುದು. ಬರೀ ಬಾಯಿನಿಂದ ಊದಬಾರದು.)

ಅಗ್ನ್ಯಾನಯನ ಪಾತ್ರಯೋಃ ಅಕ್ಷತೋದಕಂ ನಿನೀಯ ।

ಅಗ್ನಿಯನ್ನು ತಂದ ಹಿತ್ತಾಳೆ ತಟ್ಟೆಗೆ, ನೀರು ಅಕ್ಷತೆ ಹಾಕುವುದು.

ಅಗ್ನಿಮಿಧ್ವಾ ।

ಜ್ವಾಲೆ ಬರುವವರೆಗೆ ಅಗ್ನಿಯನ್ನು ಬೀಸಿ ಪುಟ ಮಾಡುವುದು.

ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತ ಹಸ್ತಾಸೋ ಅಸ್ಯ । ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋದೇವೋ ಮರ್ತ್ಯಾಗ್ಂ ಆವಿವೇಶ ॥ ಅಗ್ನಿಂ ಧ್ಯಾಯಾಮಿ ॥

ಈ ಮಂತ್ರದಿಂದ ಅಗ್ನಿಯನ್ನು ಧ್ಯಾನ ಮಾಡುವುದು.

ಏಷ ಹಿ ದೇವಃ ಪ್ರದಿಶೋ ನು ಸರ್ವಾಃ ಪೂರ್ವೋ ಹಿ ಜಾತಸ್ಸ ಉ ಗರ್ಭೇ ಅಂತಃ । ಸವಿಜಾಯಮಾನಸ್ಸಜನಿಷ್ಯಮಾಣಃ ಪ್ರತ್ಯಙ್ಮುಖಾಸ್ತಿಷ್ಠತಿ ವಿಶ್ವತೋ-ಮುಖಃ ॥ ಹೇ ಅಗ್ನೇ ಪ್ರಾಙ್ಮುಖೋ ದೇವ, ಪ್ರತ್ಯಙ್ಮುಖಸ್ಸ್ವ, ಮಮ ಅಭಿಮುಖೋ ಭವ ॥

"ಎಲೈ ಅಗ್ನಿಯೆ ! ನನಗೆ ಅಭಿಮುಖನಾಗಿ ಪ್ರತಿಷ್ಠಿತನಾಗು" ಎಂದು ಹೇಳುತ್ತಾ ಈ ಮಂತ್ರದಿಂದ ಅಗ್ನಿಯ ಹೊಗೆಯನ್ನು ಪೂರ್ವದಿಂದ ನಮ್ಮ ಕಡೆಗೆ ಎರಡು ಕೈಗಳಿಂದ ಬೀಸಿಕೊಂಡು ಆಘ್ರಾಣಿಸುವುದು.

ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ ಪ್ರಾಗಾದಿ ಪರಿಮೃಜ್ಯ ॥

ಈ ಮಂತ್ರದಿಂದ, ಅಂಗುಷ್ಠ ಕಿರುಬೆರಳುಗಳನ್ನು ಬಿಟ್ಟು ಮಿಕ್ಕ ಮೂರು ಬೆರಳುಗಳಿಂದ ಪಂಚಪಾತ್ರೆಯ ನೀರನ್ನು ಉಪಯೋಗಿಸಿಕೊಂಡು - ಸ್ಥಂಡಿಲದ ಸುತ್ತ ನೀರಿನ ಗೆರೆ ದಕ್ಷಿಣದಿಂದ ಉತ್ತರಕ್ಕೆ ಪ್ರದಕ್ಷಿಣಾಕಾರವಾಗಿ ಪಶ್ಚಿಮದಿಂದ ಪೂರ್ವಕ್ಕೆ ಎಳೆಯುವುದು.

ಅಲಂಕೃತ್ಯ :-

| | |
|---|---|
| ಅಗ್ನಯೇ ನಮಃ । | ವೈಶ್ವಾನರಾಯ ನಮಃ । |
| ಜಾತವೇದಸೇ ನಮಃ । | ನರ್ಯಾಪಸೇ ನಮಃ । |
| ಸಹೋಜಸೇ ನಮಃ । | ಪಙ್ಕ್ತಿರಾಧಸೇ ನಮಃ । |
| ಅಜಿರಾಪ್ರಭವೇ ನಮಃ । | ವಿಸರ್ಪಿಣೇ ನಮಃ । |

ಮಧ್ಯೇ ಶ್ರೀ ಯಜ್ಞಪುರುಷಾಯ ನಮಃ ॥

ಎಂದು ಹೇಳುತ್ತಾ ತೊಳೆದ ಅಕ್ಕಿಯಿಂದ ಎಂಟುದಿಕ್ಕಿನಲ್ಲಿ ಅಲಂಕರಿಸುವುದು.

ಪರಿಸ್ತೀರ್ಯ :- ಪ್ರಾಗಾದಿ ಪ್ರದಕ್ಷಿಣಾಕಾರಂ ದಕ್ಷಿಣೋತ್ತರೈಃ ಉತ್ತರಾಧರೈಃ ಪ್ರಾಗುದಗಗ್ರೈಃ ಷೋಡಶ ದರ್ಭೈಃ ಅಗ್ನಿಂ ಪರಿಸ್ತೃಣಾತಿ ॥




ಚಿತ್ರ 2. ವೇದಿಕೆ ಅಲಂಕಾರ.




ಚಿತ್ರ 3. ದರ್ಭೆ ಹರಡುವಿಕೆ

ಒಂದೊಂದು ಕಡೆಗೆ 16 ದರ್ಭೆಗಳಂತೆ, ಸ್ಥಂಡಿಲದ ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿ - ಪೂರ್ವಕ್ಕೆ ದರ್ಭೆಗಳ ತುದಿ ಇರುವಂತೆಯೂ ; ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಉತ್ತರಕ್ಕೆ ದರ್ಭೆಗಳ ತುದಿ ಇರುವಂತೆಯೂ, ಪೂರ್ವದ ಕಡೆಯಿಂದ ಪ್ರದಕ್ಷಿಣಾಕಾರವಾಗಿ ಮೇಲ್ಕಂಡ ಚಿತ್ರದಂತೆ ಪರಿಸ್ತರಣಗಳನ್ನು ಸುತ್ತ ಇಡಬೇಕು.

**ಉತ್ತರೇಣಾಗ್ನಿಂ ಪ್ರಾಗಗ್ರಾನ್ ದ್ವಾದಶ ದರ್ಭಾನ್ ಸಗ್ಂಸ್ತೀರ್ಯ ॥**

ಸ್ಥಂಡಿಲದ ಅಗ್ನಿಗೆ ಉತ್ತರ ದಿಕ್ಕಿನಲ್ಲಿ ಪೂರ್ವಾಗ್ರವಾಗಿ 12 ದರ್ಭೆಗಳನ್ನು ಇಡುವುದು.

---

**ಪ್ರೋಕ್ಷಣಾ ಪಾತ್ರ** = ಸಂಸ್ಕಾರವಾದ ಬಳಿಕ ನೀರಿನಿಂದ ದರ್ವಿ, ಸ್ರುವ, ಆಜ್ಯಸ್ಥಾಲಿಗಳನ್ನು ಪ್ರೋಕ್ಷಿಸುವ ಪಾತ್ರೆ. ಸ್ರುವ = ತೊಟ್ಟಿಲ್ಲದ ಗುಂಡು ಮುತ್ತುಗದ ಎಲೆ (ಹೋಮಕಾಲದಲ್ಲಿ ಬಲಗೈಲಿ ಹಿಡಿದುಕೊಳ್ಳುವುದು). ದರ್ವಿ = ಸ್ರುವದಿಂದ ತುಪ್ಪ ತೆಗೆದುಕೊಳ್ಳಲು ಇಟ್ಟುಕೊಂಡಿರುವ (ಸ್ರುಕ್) ಮರದ ಚಮಚ ಅಥವಾ ತೊಟ್ಟಿಲ್ಲದ ಗುಂಡು ಮುತ್ತುಗದ ಎಲೆ. ಆಜ್ಯಸ್ಥಾಲಿ = ಹೋಮಕ್ಕೆ ಉಪಯೋಗಿಸಲು ಇಟ್ಟುಕೊಂಡಿರುವ ತುಪ್ಪವಿರುವ ಹಿತ್ತಾಳೆ ಕಲಾಯಿ ಮಾಡಿದ ಬಟ್ಟಲು.

ದ್ವಂದ್ವಂ ನ್ಯಂಚಿ ಪಾತ್ರಾಣಿ ಪ್ರಯುನಕ್ತಿ ದರ್ವೀ ಆಜ್ಯಸ್ಥಾಲ್ಯೌ ಪ್ರೋಕ್ಷಣಾ ಸ್ರುವಾವಿತಿ । ಸಮೌಸಾಗ್ರೌ ದ್ವೌ ದರ್ಭೌ ಪ್ರಾದೇಶಮಾತ್ರೇ ಪವಿತ್ರೇ ಕೃತ್ವಾ ॥

ಆ 12 ದರ್ಭೆಗಳ ಮೇಲೆ ದರ್ವೀ, ಆಜ್ಯಸ್ಥಾಲಿಗಳನ್ನು ಒಮ್ಮೆಗೇ ತಲೆಕೆಳಗಾಗಿ ಇರಿಸುವುದು. ನಂತರ ಪ್ರೋಕ್ಷಣಾ, ಸ್ರುವಗಳನ್ನು ಒಮ್ಮೆಗೇ ತಲೆಕೆಳಗಾಗಿ ಇರಿಸುವುದು.

ಎರಡು ಉದ್ದವಾದ ದರ್ಭೆಗಳ ಅಗ್ರಗಳನ್ನು ಜೋಡಿಸಿ ಸಮ ಮಾಡಿಕೊಂಡು ಒಂದು ಚೋಟು (ಪ್ರಾದೇಶ) ಉದ್ದಕ್ಕೆ ಉದ್ಧರಣೆಯಿಂದ ಕತ್ತರಿಸಿ, ಅಗ್ರವುಳ್ಳ ಆ ಎರಡು ಕತ್ತರಿಸಿದ ದರ್ಭೆಗಳನ್ನು ಗಂಟುಹಾಕಿ ಪವಿತ್ರ ಮಾಡಿಕೊಳ್ಳುವುದು (ಕೂರ್ಚ ಕಟ್ಟುವುದು).

ಅದ್ಭಿರನುಮೃಜ್ಯ ।

ಈ ರೀತಿ ಕಟ್ಟಿದ ಪವಿತ್ರವನ್ನು ಪೂಜೆಗೆ ಇಟ್ಟುಕೊಂಡಿರುವ ಪಂಚಪಾತ್ರೆಯ ನೀರಿನಿಂದ ತೊಳೆದುಕೊಳ್ಳುವುದು.

ಉತ್ತಾನೇ ಪ್ರೋಕ್ಷಣಾಪಾತ್ರೇ ನಿಧಾಯ ।

ಪ್ರೋಕ್ಷಣಾಪಾತ್ರೆಯನ್ನು ಮೇಲುಮುಖ ಮಾಡಿ ಅದರ ಮೇಲೆ ಉತ್ತರಾಗ್ರವಾಗಿ ಈ ಪವಿತ್ರವನ್ನಿಡುವುದು.

ಪ್ರೋಕ್ಷ್ಯ ।

ಪಂಚಪಾತ್ರ ನೀರಿನಿಂದ ಪ್ರೋಕ್ಷಿಸುವುದು.

ಅಕ್ಷತ್ಯಸ್ಸಹ ಉದಕಮಾಸಿಚ್ಯ ।

ಆಮೇಲೆ ಈ ಪ್ರೋಕ್ಷಣೆ ಪಾತ್ರೆಗ (ದೊನ್ನೆಗೆ) ಪಂಚಪಾತ್ರೆಯಿಂದ ಸ್ವಲ್ಪ ನೀರನ್ನೂ ತೊಳೆದ ಅಕ್ಕಿಯನ್ನೂ ಹಾಕುವುದು.

ಹಸ್ತಯೋರಂಗುಷ್ಠೋಪಕನಿಷ್ಠಿಕಾಭ್ಯಾಂ ಉದಗಗ್ರೇ ಗೃಹೀತ್ವಾ ಪ್ರಾಚೀಃ ತ್ರಿರುತ್ಪೂಯ ।

ಪ್ರೋಕ್ಷಣಾ ಪಾತ್ರೆಯ ಮೇಲಿನ ಪವಿತ್ರವನ್ನು ಉತ್ತರಕ್ಕೆ ಅಗ್ರವಾಗಿಯೇ ಮಾಡಿ ಕೊಂಡು ಎರಡು ಕೈಗಳ ಅಂಗುಷ್ಠ ಮತ್ತು ಅನಾಮಿಕೆಗಳಲ್ಲಿ ಹಿಡಿದುಕೊಂಡು 3 ಸಾರಿ ಪ್ರೋಕ್ಷಣಾ ಪಾತ್ರೆಯ ನೀರನ್ನು ತೊಳಸುವುದು.

ಪಾತ್ರಾಣ್ಯುತ್ತಾನಾನಿ ಕೃತ್ವಾ ॥

ದರ್ವಿ, ಸ್ರುವ, ಆಜ್ಯಸ್ಥಾಲಿಗಳನ್ನು ನೆಟ್ಟಗೆ ಇರಿಸುವುದು.

ಸ ಪವಿತ್ರೇಣ ಹಸ್ತೇನ ತ್ರಿಃ ಪ್ರೋಕ್ಷ್ಯ ।

ಅದೇ ಪವಿತ್ರವನ್ನು ಉಪಯೋಗಿಸಿಕೊಂಡು ಪ್ರೋಕ್ಷಣಾ ಪಾತ್ರೆಯ ನೀರಿನಿಂದ ಅವುಗಳನ್ನು ಮೂರು ಸಾರಿ ಪ್ರೋಕ್ಷಿಸುವುದು.

ತತ್ಪಾತ್ರಂ ಅಗ್ನೇರ್ದಕ್ಷಿಣತೋ ನಿಧಾಯ ।

ಆಮೇಲೆ ಆ ಪ್ರೋಕ್ಷಣಾ ಪಾತ್ರೆಯನ್ನು ಅಗ್ನಿಯ ದಕ್ಷಿಣದಲ್ಲಿ ಇಡುವುದು.

ತೇ ಪವಿತ್ರೇ ಆಜ್ಯಪಾತ್ರೇ ನಿಧಾಯ ।

ಮೇಲ್ಕಂಡ (ಪ್ರೋಕ್ಷಣೀ ಪಾತ್ರೆಯ ನೀರನ್ನು ತೊಳಸಲು ಉಪಯೋಗಿಸಿದ) ಪವಿತ್ರವನ್ನು (ಆಜ್ಯಹಾಕುವ ದೊನ್ನೆಯ) ಮೇಲೆ ಉತ್ತರಾಗ್ರವಾಗಿ ಇರಿಸುವುದು.

ಆಜ್ಯಂ ವಿಲಾಪ್ಯ । ವಿಲೀನಮಪಿ ಅಗ್ನಾವಧಿಶ್ರಿತ್ಯ ।

ತುಪ್ಪ ಇರುವ ಆಜ್ಯಸ್ಥಾಲಿ*ಯನ್ನು ಅಗ್ನಿಯಲ್ಲಿ ತುಪ್ಪ ಕರಗುವವರೆಗೆ ಕಾಯಿಸಬೇಕು.

ಪರಿಸ್ತರಣಾತ್ ಉದೀಚಃ ಅಂಗಾರಾನ್ನಿರೂಹ್ಯ । ತೇಷು ಆಜ್ಯಪಾತ್ರಮಧಿಶ್ರಿತ್ಯ ॥

ಅಗ್ನಿಯ ಉತ್ತರಭಾಗದಿಂದ ಮೂರು ಅಥವಾ ಹೆಚ್ಚು ಕೆಂಡವನ್ನು, ಬೆರಣಿಯ ಚೂರಿನಿಂದ ತೆಗೆದುಕೊಂಡು ಪರಿಸ್ತರಣ ದಿಕ್ಕಿನಲ್ಲಿರುವ, ಮತ್ತು ಪಾತ್ರಾಸಾಧನೆಯ ದರ್ಭೆಯ ಮಧ್ಯೆ ಇಡಬೇಕು. (ದರ್ವಿಯ ತುಪ್ಪವನ್ನು ಆ ಕೆಂಡದಲ್ಲಿ ಕಾಯಿಸಿದಂತೆ ಭಾವನೆ ಮಾಡಿಕೊಳ್ಳಬೇಕು).

ದರ್ಭೇಣ ಜ್ವಲತಾ ಅವದ್ಯುತ್ಯ ।

ಒಂದು ಉದ್ದವಾದ ದರ್ಭೆಯನ್ನು, ಅಗ್ನಿಯಲ್ಲಿ ಹತ್ತಿಸಿ, ಆ ಜ್ವಾಲೆಯಿಂದ ಆಜ್ಯಪಾತ್ರೆಯ ಸುತ್ತಲೂ, ಮೂರು ಸುತ್ತು ಸುತ್ತಿ ಆಜ್ಯಪಾತ್ರೆಯಲ್ಲಿ ಅದ್ದಿ ಉತ್ತರದಿಕ್ಕಿಗೆ ಹಾಕಿ ಬಿಡುವುದು.

ದ್ವೇ ದರ್ಭಾಗ್ರೇ ಪ್ರಚ್ಛಿದ್ಯ, ಪ್ರಕ್ಷಾಳ್ಯ, ಆಜ್ಯೇ ಪ್ರತ್ಯಸ್ಯ ।

ಎರಡು ಉದ್ದವಾದ ದರ್ಭೆಗಳ ತುದಿಗಳನ್ನು ಉದ್ಧರಣೆಯಿಂದ ಚಿಗುಟುವುದು ಆ ಚಿಗುಟಿದ ತುದಿಗಳನ್ನು, ನೀರಿನಲ್ಲಿ ಅದ್ದಿ ಆಜ್ಯಪಾತ್ರೆಗೆ ಹಾಕುವುದು.

ತ್ರಿಃ ಪರ್ಯಗ್ನಿ ಕೃತ್ವಾ ಉದಗುದ್ವಾಸ್ಯ ।

ಒಂದು ಅಗ್ರವಿರುವ ದರ್ಭೆಯನ್ನು ಹೊತ್ತಿಸಿಕೊಂಡು ಆಜ್ಯಪಾತ್ರೆಗೆ ಪ್ರದಕ್ಷಿಣಾ ಕಾರವಾಗಿ 3 ಬಾರಿ ಸುತ್ತಿ, ಸುಟ್ಟ ದರ್ಭೆಯನ್ನು ಉತ್ತರದಿಕ್ಕಿನಲ್ಲಿ ವಿಸರ್ಜಿಸುವುದು.

ಅಂಗಾರಾನ್ಪ್ರತ್ಯೂಹ್ಯ ।

ಆಜ್ಯಪಾತ್ರೆಯ ಪಕ್ಕದಲ್ಲಿ ಇಟ್ಟಿದ್ದ ಕೆಂಡವನ್ನು ಅಗ್ನಿಯಲ್ಲಿ ಹಾಕುವುದು.

ಅಪರೇಣಾಗ್ನಿಂ ಉದಗಗ್ರಾಭ್ಯಾಂ ಪವಿತ್ರಾಭ್ಯಾಂ ಪ್ರಾಗಾದಿ ಪುನರಾಹಾರಮಾಜ್ಯಂ ತ್ರಿರುತ್ಪೂಯ ।

ಅಗ್ನಿಯ ಪಶ್ಚಿಮದಿಕ್ಕಿಗೆ ಆಜ್ಯಪಾತ್ರೆಯ ಮೇಲೆ ಉತ್ತರಾಗ್ರವಾಗಿರುವ ಪವಿತ್ರ ದಿಂದ ಆಜ್ಯಪಾತ್ರೆಯಲ್ಲಿರುವ ಕರಗಿದ ತುಪ್ಪವನ್ನು 3 ಸಾರಿ ಆರೆಯುವುದು.

ಪವಿತ್ರಗ್ರಂಥಿಂ ವಿಸ್ರಸ್ಯ । ಅಪ ಉಪಸ್ಪೃಶ್ಯ । ಪ್ರಾಗಗ್ರಾವಗ್ನೌ ಪ್ರಹರತಿ ॥

ಆಮೇಲೆ ಆ ಪವಿತ್ರದ ಗಂಟನ್ನು ಬಿಚ್ಚಿ ನೀರಿನಿಂದ ತೊಳೆದು ಪೂರ್ವ ದಿಕ್ಕಿಗೆ ಅಗ್ರ ಮಾಡಿಕೊಂಡು ಅಗ್ನಿಗೆ ಹಾಕುವುದು.

---

ಆಜ್ಯಸ್ಥಾಲಿ :- ತುಪ್ಪ ಹಾಕಿಕೊಳ್ಳುವ ದೊನ್ನೆ ಅಥವಾ ಹಿತ್ತಾಳೆ ಬಟ್ಟಲು.

ದರ್ಭೈಸ್ಸಹ ಸ್ರುವಂ ದಕ್ಷಿಣಹಸ್ತೇನ, ಜುಹೂಂ ವಾಮಹಸ್ತೇನ ಆದಾಯ ।

ಬೇರೆ ಮೂರು ಉದ್ದವಾದ ದರ್ಭೆಗಳನ್ನೂ ಮತ್ತು ಸ್ರುವವನ್ನೂ ಬಲಗೈಲಿ ತೆಗೆದುಕೊಳ್ಳುವುದು. ಎಡಗೈಲಿ 'ಸ್ರುಕ್ಕ'ನ್ನು ಹಿಡಿದುಕೊಳ್ಳುವುದು.

ಸ್ರುಕ್‌ಸ್ರುವಾವಗ್ನೌ ಪ್ರತಿತಪ್ಯ । ದರ್ಭೈಃ ಸಕೃದೇವ ಸಂಮೃಜ್ಯ । ಅಗ್ರೈರಗ್ರಂ - ಮೂಲೈರ್ಮೂಲಂ ಪುನಃ ಪ್ರತಿತಪ್ಯ । ಪ್ರೋಕ್ಷ್ಯ, ನಿಧಾಯ ॥

ಸ್ರುಕ್, ಸ್ರುವಗಳನ್ನು ಅಗ್ನಿಯಲ್ಲಿ ಕಾಯಿಸುವುದು. ಮತ್ತೆ ಆ ಮೂರು ದರ್ಭೆಗಳ ಮೇಲು ತುದಿಗಳಿಂದ ಸ್ರುಕ್, ಸ್ರುವಗಳ ಮೇಲು ಭಾಗಗಳನ್ನೂ, ಕೆಳ ತುದಿಗಳಿಂದ, ಆ ಸ್ರುಕ್ ಸ್ರುವಗಳ ಕೆಳಭಾಗಗಳನ್ನೂ ಸವರುವುದು. ಆಮೇಲೆ ಅಗ್ನಿಯಲ್ಲಿ ಅವುಗಳನ್ನು ಪುನಃ ಕಾಯಿಸುವುದು.

ಆಮೇಲೆ ನೀರಿನಲ್ಲಿ ಆ ಎರಡು ಉದ್ದವಾದ ದರ್ಭೆಗಳನ್ನು ಅದ್ದಿ ಆ ನೀರಿನಿಂದ ಸ್ರುಕ್ ಸ್ರುವಗಳನ್ನು ಪ್ರೋಕ್ಷಿಸುವುದು.

ಹೀಗೆ ಮಾಡಿಕೊಂಡು ಸ್ರುಕ್ ಸ್ರುವಗಳನ್ನು ಆಜ್ಯಪಾತ್ರೆಯ (ತುಪ್ಪದ ದೊನ್ನೆಯ) ಎಡಬಲಭಾಗಗಳಲ್ಲಿ ತನ್ನ ಮುಂದೆ ಇಟ್ಟುಕೊಳ್ಳುವುದು.

ದರ್ಭಾನ್ ಅದ್ಭಿಃ ಸಗ್ಂಸ್ಪೃಶ್ಯ ಅಗ್ನೌ ಪ್ರಹರತಿ ॥

ಸ್ರುಕ್, ಸ್ರುವಗಳನ್ನು ಸವರಿದ ಮತ್ತು ಪ್ರೋಕ್ಷಿಸಿದ, ದರ್ಭೆಗಳನ್ನು ನೀರಿನಲ್ಲಿ ಅದ್ದಿ ಅಗ್ನಿಗೆ ಹಾಕುವುದು.

ಅಗ್ನಿಂ ಪರಿಷಿಚ್ಯ ॥

ಅದಿತೇಽನುಮನ್ಯಸ್ವ (ದಕ್ಷಿಣತಃ ಪ್ರಾಚೀನಂ) । ಅನುಮತೇಽನು ಮನ್ಯಸ್ವ (ಪಶ್ಚಾದುದೀಚೀನಂ) । ಸರಸ್ವತೇಽನು ಮನ್ಯಸ್ವ (ಉತ್ತರತಃ ಪ್ರಾಚೀನಂ) । ದೇವಸವಿತಃ ಪ್ರಸುವ (ಸಮಂತಂ ಪ್ರದಕ್ಷಿಣಾಕಾರಂ ಪರಿಷಿಚ್ಯ) ॥

'ಅದಿತೇನು' ಮಂತ್ರದಿಂದ ಸ್ಥಂಡಿಲದ ದಕ್ಷಿಣದಲ್ಲಿ ಪಶ್ಚಿಮದಿಂದ ಪೂರ್ವಕ್ಕೂ 'ಅನುಮತೇನು' ಮಂತ್ರದಿಂದ ಸ್ಥಂಡಿಲದ ಪಶ್ಚಿಮದಲ್ಲಿ ದಕ್ಷಿಣದಿಂದ ಉತ್ತರಕ್ಕೂ 'ಸರಸ್ವತೇನು' ಮಂತ್ರದಿಂದ ಸ್ಥಂಡಿಲದ ಉತ್ತರದಲ್ಲಿ ಪಶ್ಚಿಮದಿಂದ ಪೂರ್ವಕ್ಕೂ 'ದೇವಸವಿತಃ' ಮಂತ್ರದಿಂದ ಸ್ಥಂಡಿಲದ ಎಡಭಾಗದಿಂದ ಹಿಡಿದು ಬಲಭಾಗ ಪೂರ್ತಿ ಸುತ್ತಲೂ (ಪ್ರದಕ್ಷಿಣಾಕಾರವಾಗಿ) ಸ್ಥಂಡಿಲವನ್ನು ನೀರಿನಿಂದ ಪರಿಷೇಚಿಸುವುದು.

ಸ್ರುವೇಣ ಚತುರ್ಗೃಹೀತೇನ ಆಜ್ಯೇನ ಸ್ರುಚಂ ಪೂರಯಿತ್ವಾ । ಏಕಂ ದ್ವೇ ತ್ರೀಣಿ ಚತ್ವಾರಿ । ಓಂ ಅದ್ಯ ಮಯಾ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ, ಮಮ ಉಪಾತ್ತ ಸಮಸ್ತದುರಿತಕ್ಷಯದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ಅಗ್ನಿ ಸಿದ್ಧ್ಯರ್ಥಂ ವ್ಯಾಹೃತಿಹೋಮಂ ಕರಿಷ್ಯೇ ॥

ಓಂ ಭೂರ್ಭುವಸ್ಸುವಸ್ಸ್ವಾಹಾ । ಪ್ರಜಾಪತಯ ಇದಂ ನಮಮ ॥

ಸ್ರುವದಿಂದ ಸ್ರುಚಕ್ಕೆ (ಸ್ರುಕ್ಕಿಗೆ) ಏಕಂ, ದ್ವೇ, ತ್ರೀಣಿ, ಚತ್ವಾರಿ ಎಂದು ಹೇಳಿಕೊಂಡು 4 ಸಾರಿ ಆಜ್ಯಪಾತ್ರೆಯ ತುಪ್ಪವನ್ನು ಹಾಕಿಕೊಳ್ಳುವುದು.

ಅನಂತರ ಆ ಸ್ರುಚವನ್ನು ಬಲಗೈಲಿ ಹಿಡಿದುಕೊಂಡು, ಸಮಸ್ತದುರಿತಕ್ಷಯಕ್ಕೂ ಅಗ್ನಿಸಿದ್ಧಿಗಾಗಿಯೂ ವ್ಯಾಹೃತಿ ಹೋಮ ಮಾಡುತ್ತೇನೆಂದು ಸಂಕಲ್ಪಿಸಿ - 'ಓಂ ಭೂರ್ಭುವಸ್ಸುವಃ ಸ್ವಾಹಾ । ಪ್ರಜಾಪತಯ ಇದಂ ನಮಮ' ಎಂದು ಹೇಳಿಕೊಂಡು ಅಗ್ನಿಯಲ್ಲಿ ಹೋಮ ಮಾಡುವುದು.

ಪುನಶ್ಚತುರ್ಗೃಹೀತಂ । ಏಕಂ ದ್ವೇ ತ್ರೀಣಿ ಚತ್ವಾರಿ ॥

ಪುನಃ ಸ್ರುವದಿಂದ ಸ್ರುಚಕ್ಕೆ - ಏಕಂ, ದ್ವೇ, ತ್ರೀಣಿ, ಚತ್ವಾರಿ - ಎಂದು ಹೇಳಿಕೊಂಡು 4 ಸಾರಿ ಆಜ್ಯಪಾತ್ರೆಯ ತುಪ್ಪವನ್ನು ಹಾಕಿಕೊಂಡು - ಆ ಸ್ರುಚವನ್ನು ಬಲಗೈಲಿ ಹಿಡಿದುಕೊಂಡು ಹೋಮ ಮಾಡಲು ಸಿದ್ಧಮಾಡಿಕೊಳ್ಳುವುದು.

ಓಂ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಮಮ ಅನೇಕ ಕಾಲ ಉಪವಾಸ ಅಕರಣ ದೋಷ ಪ್ರಾಯಶ್ಚಿತ್ತಾರ್ಥಂ ಸಾಯಂಪ್ರಾತಃ ಔಪಾಸನವಿಚ್ಛಿತ್ತಿ ದರ್ಶಪೂರ್ಣಮಾಸ, ಸ್ಥಾಲೀಪಾಕ ಅಕರಣಾದಿ ಸಮಸ್ತ ದೋಷ ಪ್ರಾಯಶ್ಚಿತ್ತಾರ್ಥಂ - ಅಯಾಶ್ಚಹೋಮಂ ಕರಿಷ್ಯೇ ॥

ಅಯಾಶ್ಚಾಗ್ನೇಸ್ಯನಭಿಶಸ್ತೀಶ್ಚ ಸತ್ಯಮಿತ್ತ್ವಮಯಾ ಅಸಿ । ಅಯಸಾ ಮನಸಾ ಧೃತೋಽಯಸಾ ಹವ್ಯಮೂಹಿಷೇಽಯಾನೋ ಧೇಹಿ ಭೇಷಜಗ್ಂ ಸ್ವಾಹಾ ॥

ಅಗ್ನಯೇ ಅಯಸ ಇದಂ ನಮಮ ॥

ಸಾಯಂಪ್ರಾತಃ - ಔಪಾಸನ ಮಾಡದಿರುವುದು - ದರ್ಶಪೂರ್ಣಮಾಸ, ಸ್ಥಾಲೀಪಾಕಾದಿಗಳ ಅಕರಣ - ಉಪವಾಸ ಅಕರಣ ಇವೇ ಮೊದಲಾದ ಸರ್ವದೋಷಗಳ ಪ್ರಾಯಶ್ಚಿತ್ತಕ್ಕಾಗಿ 'ಅಯಾಶ್ಚ' ಹೋಮ ಮಾಡುತ್ತೇನೆಂದು ಸಂಕಲ್ಪ ಮಾಡಿಕೊಂಡು ಈ ಅಯಾಶ್ಚಾಗ್ನೇ ಮಂತ್ರದಿಂದ ಒಂದು ಸಲ ಹೋಮ ಮಾಡಬೇಕು.

ಮಹಾಹವಿರ್ ಹೋತಾ । ಸತ್ಯಹವಿರಧ್ವರ್ಯುಃ । ಅಚ್ಯುತ ಪಾಜಾ ಅಗ್ನೀತ್ । ಅಚ್ಯುತ ಮನಾ ಉಪವಕ್ತಾ । ಅನಾಧೃಷ್ಯಶ್ಚಾ ಪ್ರತಿಧೃಷ್ಯಶ್ಚ ಯಜ್ಞಸ್ಯಾಭಿಗರೌ । ಅಯಾಸ್ಯ ಉದ್ಗಾತಾ । ವಾಚಸ್ಪತೇ ಹೃದ್ವಿಧೇ ನಾಮನ್ । ವಿಧೇಮತೇ ನಾಮ । ವಿಧೇಸ್ತ್ವಮಸ್ಮಾಕಂ ನಾಮ । ವಾಚಸ್ಪತಿಃ ಸೋಮಮಪಾತ್ । ಮಾ ದೈವ್ಯಸ್ತಂತು

ಶ್ಚೇದಿಮಾ ಮನುಷ್ಯಃ । ನಮೋ ದಿವೇ । ನಮಃ ಪೃಥಿವ್ಯೈ ಸ್ವಾಹಾ । ಅಗ್ನಯ ಇದಂ ನಮಮ ॥ ಮನೋ ಜ್ಯೋತಿರ್ಜುಷತಾಮಾಜ್ಯಂ ವಿಚ್ಛಿನ್ನಂ ಯಜ್ಞಗ್ಂ ಸಮಿಮಂ ದಧಾತು । ಯಾ ಇಷ್ಟಾ ಉಷಸೋ ನಿಮ್ರುಚಶ್ಚ ತಾಃ ಸ್ಸಂದಧಾಮಿ ಹವಿಷಾ ಘೃತೇನ ಸ್ವಾಹಾ । ಮನಸೇ ಜ್ಯೋತಿಷೇ ಉಷೋಗ್ಭ್ಯೋನಿಮ್ರುಗ್ಭ್ಯ ಇದಂ ನಮಮ ॥ ಯದಸ್ಮಿನ್ ಯಜ್ಞೇಂತರಗಾಮ ಮಂತ್ರತಃ ಕರ್ಮತೋವಾ । ಅನಯಾ ಹುತ್ಯಾ ತಚ್ಛಮಯಾಮಿ ಸರ್ವಂ ತೃಪ್ಯಂತು ದೇವಾ ಆಪ್ಯಾಯಂತಾಂ ಘೃತೇನ ಸ್ವಾಹಾ ॥ ದೇವೇಭ್ಯ ಇದಂ ನಮಮ ॥ ತ್ರಯಸ್ತ್ರಿಗ್ಂಶತ್ತಂತವೋಯೇ ವಿತತ್ನಿರೇಯ ಇಮಂ ಯಜ್ಞಗ್ಂ ಸ್ವಧಯಾ ದದಂತೇ ತೇಷಾಂ ಛಿನ್ನಂ ಪ್ರತ್ಯೇತದ್ದಧಾಮಿ ಸ್ವಾಹಾ ಘರ್ಮೋ ದೇವಾಗ್ಂ ಅಪ್ಯೇತು ಸ್ವಾಹಾ । ದೇವೇಭ್ಯ ಇದಂ ನಮಮ ॥ ತಂ ತುಂ ತನ್ವನ್ರಜಸೋ ಭಾನುಮನ್ವಿಹಿ ಜ್ಯೋತಿಷ್ಮತಃ ಪಥೋರಕ್ಷ ಧಿಯಾಕೃತಾನ್ । ಅನುಲ್ಬಣಂವಯತ ಜೋಗುವಾಮ ಪೋಮನುರ್ಭವಜನಯಾದೈವ್ಯಂ ಜನಗ್ಂ ಸ್ವಾಹಾ । ಅಗ್ನಯೇ ತಂತುಮತ ಇದಂ ನಮಮ ॥ ಉದ್ಬುಧ್ಯಸ್ವಾಗ್ನೇ ಪ್ರತಿಜಾಗೃ ಹ್ಯೇನ ಮಿಷ್ಟಾ ಪೂರ್ತೇ ಸಗ್ಂ ಸೃಜೇಥಾಮಯಂಚ । ಪುನಃ ಕೃಣ್ವಗ್ಂ ಸ್ತ್ವಾ ಪಿತರಂ ಯುವಾನಮನ್ವಾತಾಗ್ಂಸೀ ತ್ವಯಿ ತಂತು ಮೇ ತಗ್ಂಸ್ವಾಹಾ ॥ ಅಗ್ನಯೇ ತಂತುಮತ ಇದಂ ನಮಮ ॥ ಉದುತ್ತಮಂ ವರುಣ ಪಾಶಮಸ್ಮದವಾಧಮಂ ವಿಮಧ್ಯ ಮಗ್ಂಶ್ರಥಾಯ । ಅಥಾ ವಯಮಾದಿತ್ಯ ವ್ರತೇತವಾನಾಗಸೋಅದಿತಯೇ ಸ್ಯಾಮಸ್ವಾಹಾ ॥ ವರುಣಾಯೇದಂ ನಮಮ ॥ ಉದ್ವಯಂ ತಮಸಸ್ಪರಿ ಪಶ್ಯಂತೋ ಜ್ಯೋತಿರುತ್ತರಮ್ । ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಗ್ಂ ಸ್ವಾಹಾ ॥ ದೇವೇಭ್ಯ ಇದಂ ನಮಮ ॥ ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಗ್ಂಸ್ವಾಹಾ । ದೇವೇಭ್ಯ ಇದಂ ನಮಮ । ಚಿತ್ರಂ ದೇವಾನಾಮುದಗಾದನೀಕಂ

ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ । ಆಪ್ರಾದ್ಯಾವಾ ಪೃಥಿವೀ ಅಂತರಿಕ್ಷಗ್ಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ಸ್ವಾಹಾ ॥ ಸೂರ್ಯಾಯೇದಂ ನಮಮ ॥ ಅಗ್ನೇಽಭ್ಯಾವರ್ತಿನ್ನಭಿನ ಆವರ್ತ ಸ್ವಾಯುಷಾ ವರ್ಚಸಾ ಸನ್ಯಾ ಮೇಧಯಾ ಪ್ರಜಯಾ ಧನೇನ ಸ್ವಾಹಾ । ಅಗ್ನಯೇ ಅಭ್ಯಾವರ್ತಿನಇದಂ ನಮಮ ॥ ಅಗ್ನೇ ಅಂಗಿರಶ್ಶತಂತೇ ಸಂತ್ವಾವೃತಸ್ಸಹಸ್ರಂತ ಉಪಾವೃತಃ । ತಾಸಾಂ ಪೋಷಸ್ಯ ಪೋಷೇಣ ಪುನರ್ನೋನಷ್ಟಮಾ ಕೃಧಿ ಪುನರ್ನೋರ ಯಿಮಾಕೃಧಿ ಸ್ವಾಹಾ । ಅಗ್ನಯೇ ಅಂಗಿರಸ ಇದಂ ನಮಮ ॥ ಪುನರೂರ್ಜಾನಿವರ್ತಸ್ವ ಪುನರಗ್ನ ಇಷಾಯುಷಾ । ಪುನರ್ನಃ ಪಾಹಿವಿಶ್ವತಃ ಸ್ವಾಹಾ । ಅಗ್ನಯ ಇದಂ ನಮಮ ॥ ಸಹರಯ್ಯಾ ನಿವರ್ತಸ್ವಾಗ್ನೇ ಪಿನ್ವಸ್ವಧಾರಯಾ । ವಿಶ್ವಪ್ಸ್ನಿಯಾ ವಿಶ್ವತಸ್ಪರಿ ಸ್ವಾಹಾ । ಅಗ್ನಯ ಇದಂ ನಮಮ ॥

ಸ್ರುವೇಣ ಸರ್ವಪ್ರಾಯಶ್ಚಿತ್ತಾರ್ಥಂ ಹೋಷ್ಯಾಮಿ ॥ ಓಂ ಭೂರ್ಭುವಸ್ಸುವಸ್ವಾಹಾ । ಪ್ರಜಾಪತಯ ಇದಂ ನಮಮ ॥

ಸ್ರುವದಿಂದ ಒಂದು ಸಾರಿ 'ಓಂ ಭೂರ್ಭುವಸ್ಸುವಸ್ವಾಹಾ - ಪ್ರಜಾಪತಯ ಇದಂ ನಮಮ' ಎಂದು ಸರ್ವಪ್ರಾಯಶ್ಚಿತ್ತಾರ್ಥವಾಗಿ ಅಗ್ನಿಯಲ್ಲಿ ಹೋಮ ಮಾಡುವುದು.

ಆಜ್ಯಪಾತ್ರಮುತ್ತರತೋ ನಿಧಾಯ ॥

ಆಜ್ಯಪಾತ್ರೆಯನ್ನು ಸ್ಥಂಡಿಲದ ಉತ್ತರಕ್ಕೆ ಇಟ್ಟುಕೊಳ್ಳುವುದು.

ಓಂ ಅದಿತೇಽನ್ವಮಗ್ಂಸ್ಥಾಃ । ಅನುಮತೇಽನ್ವಮಗ್ಂಸ್ಥಾಃ । ಸರಸ್ವತೇಽನ್ವಮಗ್ಂಸ್ಥಾಃ । ದೇವಸವಿತಃ ಪ್ರಾಸಾವೀಃ ॥

(ಪೂರ್ವವದ್ಯಥಾಕ್ರಮಂ ಪರಿಷಿಚ್ಯ)

ಈ ಮಂತ್ರಗಳಿಂದ ಹಿಂದಿನಂತೆಯೇ ಅಗ್ನಿಗೆ ಪರಿಷೇಚನೆ ಮಾಡುವುದು.

ಹೋಮಾಂತೇ ಯಜ್ಞೇಶ್ವರಾಯ ನಮಃ । ಧ್ಯಾಯಾಮಿ, ಧ್ಯಾನಂ ಸಮರ್ಪಯಾಮಿ ॥

ಆವಾಹಯಾಮಿ, ಆಸನಂ ಸಮರ್ಪಯಾಮಿ ॥

ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ ॥

ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ ॥
ಮುಖೇ ಆಚಮನೀಯಮಾಚಮನೀಯಂ ಸಮರ್ಪಯಾಮಿ ॥
ಗಂಧಾನ್ ಧಾರಯಾಮಿ ।
ಅಕ್ಷತಾನ್ ಸಮರ್ಪಯಾಮಿ ।
ಪುಷ್ಪಾಣಿ ಸಮರ್ಪಯಾಮಿ ।
ಧೂಪಮಾಘ್ರಾಪಯಾಮಿ ।
ದೀಪಂ ದರ್ಶಯಾಮಿ ।
ಆಜ್ಯೋಪಹಾರ ನೈವೇದ್ಯಂ ನಿವೇದಯಾಮಿ ।
ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ । ನಮಸ್ಕರೋಮಿ ॥

ಈ ಮಂತ್ರಗಳಿಂದ ಯಜ್ಞೇಶ್ವರನಿಗೆ ಷೋಡಶೋಪಚಾರ ಪೂಜೆ ಸಲ್ಲಿಸುವುದು. ಅಕ್ಷತೆಯಿಂದ ಪೂಜೆಮಾಡಿ ಹಿತ್ತಾಳೆ ಬಟ್ಟಲಿನಿಂದ ಸ್ವಲ್ಪ ತುಪ್ಪವನ್ನು ತೆಗೆದುಕೊಂಡು ನೈವೇದ್ಯ ಮಾಡುವುದು.

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋ ಹೋಮಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ।
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಹುತಾಶನ ।
ಯದ್ಧುತಂತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಮಯಾ ಕೃತೇನ ಪುನಸ್ಸಂಧಾನ ಹೋಮೇನ ಭಗವಾನ್ ಸರ್ವಾತ್ಮಕಃ ಸರ್ವಂ ಶ್ರೀ ಯಜ್ಞೇಶ್ವರಃ ಪ್ರೀಣಾತು ॥

ಹೀಗೆ ಹೇಳಿ ಉದ್ಧರಣೆಯಿಂದ ನೀರು ಬಿಡುವುದು.

ಇತಿ ಪುನಸ್ಸಂಧಾನಮ್ ॥*

---

* ಔಪಾಸನಾಗ್ನಿಯನ್ನು ಪಾಣಿಗ್ರಹಣಕಾಲದಿಂದ ನಿತ್ಯವೂ ಧರಿಸಿ ಅಂದರೆ ಹೋಮಮಾಡುತ್ತಾ ಕಾಪಾಡಿಕೊಂಡು ಬರಬೇಕು. ಅದು ನಷ್ಟವಾದಲ್ಲಿ ಅಗ್ನಿಯನ್ನು ಮಂಥನದಿಂದ ಉತ್ಪತ್ತಿಮಾಡಿ ಅದರಲ್ಲಿ ಅಗ್ನಿಸಿದ್ಧಿಗಾಗಿ ವ್ಯಾಹೃತಿ ಹೋಮಮಾಡಿ ಅನಂತರ ಪ್ರಾಯಶ್ಚಿತ್ತಕ್ಕಾಗಿ 'ಅಯಾಶ್ಚ' ಹೋಮಮಾಡಿ ಕೊನೆಯಲ್ಲಿ ತ್ಯಜಿಸಬೇಕು ಎಂಬುದು ಗೃಹ್ಯಸೂತ್ರದಂತೆ, ನಷ್ಟವಾದ ಅಗ್ನಿಯ ಉತ್ಪತ್ತಿ ಕ್ರಮ.

# ಔಪಾಸನಮ್§

ಪ್ರಾಣಾನಾಯಮ್ಯ ।

ಪ್ರಾಣಾಯಾಮ ಮಾಡುವುದು.

ಓಂ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಅನೇಕ ಕಾಲ ಸಾಯಂಪ್ರಾತರೌಪಾಸನ ಹೋಮ ಅಕರಣ, ಲೋಪ ದೋಷ ಪ್ರಾಯಶ್ಚಿತ್ತಾರ್ಥಂ - ಅದ್ಯ, ಪ್ರಾತರೌಪಾಸನ ಅಧಿಕಾರಯೋಗ್ಯತಾ ಸಿದ್ಧ್ಯರ್ಥಂ - ಯಥಾಶಕ್ತಿ ತಂಡುಲಕೃಚ್ಛ್ರ, ಆಜ್ಯಕೃಚ್ಛ್ರ, ಹಿರಣ್ಯಕೃಚ್ಛ್ರ ಪ್ರತ್ಯಾಮ್ನಾಯಂ ಇದಂ ಹಿರಣ್ಯಂ ಯಜ್ಞೇಶ್ವರ ಪ್ರೀತ್ಯರ್ಥಂ ಶ್ರೀಮನ್ನಾರಾಯಣ ಸ್ವರೂಪಾಯ ಬ್ರಾಹ್ಮಣಾಯ ತುಭ್ಯಮಹಂ ಸಂಪ್ರದದೇ ನಮಮ ನಮಮ ||

ಈ ರೀತಿ ಸಂಕಲ್ಪಿಸಿ ಈ ಮಂತ್ರದಿಂದ ಯಥಾಶಕ್ತಿ ನೋಡಿಕೊಂಡು ನಿತ್ಯ ಔಪಾಸನ ಮಾಡದೇಬಿಟ್ಟ, ದೋಷಪ್ರಾಯಶ್ಚಿತ್ತಾರ್ಥವಾಗಿ ದಕ್ಷಿಣೆಯನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಈ ದಕ್ಷಿಣೆಗೆ ಸ್ವಲ್ಪ ಅಕ್ಕಿ ನೀರು ಹಾಕಿಕೊಂಡು ನೆಲದ ಮೇಲೆ ಬಿಡುವುದು.

(ಇದು ಪುರೋಹಿತರಿಗೆ ಸಲ್ಲಬೇಕು.)

ಔಪಾಸನಾಧಿಕಾರ ಯೋಗ್ಯತಾ ಸಿದ್ಧಿರಸ್ತು ||

ಪುರೋಹಿತರು - "ಔಪಾಸನಾಧಿಕಾರ ಯೋಗ್ಯತೆ ನಿಮಗೆ ಉಂಟಾಗಲಿ" ಎಂದು ಆಶೀರ್ವದಿಸಬೇಕು.

---

§ ಆಪಸ್ತಂಬ ಗೃಹ್ಯಸೂತ್ರದಲ್ಲಿ ಔಪಾಸನಾಗ್ನಿಯ ವಿಷಯದಲ್ಲಿ - ನಿತ್ಯಃ ||೫-೧೫|| ಧಾರ್ಯಃ ||೧೬|| ಅನುಗತೋಮಂಥ್ಯಃ ||೧೭|| ಅನುಗತೋಽಪಿ ಶ್ರೋತ್ರಿಯಾ ಜುಹುಯಾನ್ನೋಪ ವಸೇತ್ ||೨೦|| ಎಂದು ಹೇಳಿರುತ್ತೆ. ಈ ಸೂತ್ರದ ವ್ಯಾಖ್ಯಾನಕಾರರು (ಬಹುಶಃ ಭಟ್ಟೀಯ ವ್ಯಾಖ್ಯಾನಕಾರರು) 'ಇಯಮನುಗತಾಗ್ನೇ ಉತ್ಪತ್ತಿ - ಪ್ರಾಯಶ್ಚಿತ್ತಃ' ಎಂದಿದ್ದಾರೆ

ನಿರ್ಣಯಸಿಂಧುವಿನಲ್ಲಿ :- ನಷ್ಟಾಗ್ನಿರ್ದೂರಭಾರ್ಯಶ್ಚ - ಪಾರ್ವಣೇ ಸಮುಪಸ್ಥಿತೇ । ಸಂಧಾಯಾಗ್ನಿಂ ತತೋ ಹೋಮಂ ಕೃತ್ವಾ ತಂ ವಿಸೃಜೇತ್ಪುನಃ ||

(ಅಯಾಶ್ಚೇತಿ - ತತ್ಕಾಲೇ ಅಗ್ನಿಂ - ಸಂಧಾಯ - ಹುತ್ವಾ, ತ್ಯಜೇದಿತ್ಯರ್ಥಃ) ಎಂದಿದೆ. ಇದರಂತೆ ಶ್ರಾದ್ಧದ ದಿನ ಪ್ರಾತಃಕಾಲ ಲೌಕಿಕಾಗ್ನಿಯಲ್ಲಿ ಪುನಸ್ಸಂಧಾನ, ತತ್ಕಾಲ ಔಪಾಸನೆಗಳನ್ನು ಮಾಡಿ, ಆ ಅಗ್ನಿಯನ್ನೇ ದಕ್ಷಿಣಾಗ್ನಿಯಾಗಿ, ಪರಿಸ್ತರಣಗಳ ದಿಕ್ಕುಬದಲಾವಣೆಯಿಂದ ಮಾಡಿಕೊಂಡು ಅದರಲ್ಲಿ 'ಅಗ್ನೌಕರಣ' ಮಾಡಿ. ಅನಂತರ ಅದರ ಪರಿಸ್ತರಣಗಳನ್ನು ಪೂರ್ವವತ್ ಬದಲಾಯಿಸಿ - ಶ್ರಾದ್ಧಾಂತ್ಯದಲ್ಲಿ ಆ ಅಗ್ನಿಯನ್ನು ತ್ಯಜಿಸುವುದನ್ನು ಇಲ್ಲಿ ವಿವರಿಸಿದೆ. (ಸಮಿತ್ಸಮಾರೋಪಣೆಯನ್ನು ಇಲ್ಲಿ ತೆಗೆದುಕೊಂಡಿಲ್ಲ).

## ಅಥ ಪ್ರಾತರೌಪಾಸನಮ್

ಪ್ರಾಣಾನಾಯಮ್ಯ ॥

ಓಂ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಪ್ರಾತರೌಪಾಸನ ಹೋಮಂ ತಂಡುಲೈರ್ಹೋಷ್ಯಾಮಿ - ಇತಿ ಸಂಕಲ್ಪ್ಯ ॥

ಅನಂತರ ಪ್ರಾತರೌಪಾಸನೆಯನ್ನು ಮಾಡಬೇಕು.
ಪ್ರಾಣಾಯಾಮ ಪೂರ್ವಕ ಪ್ರಾತರೌಪಾಸನೆಗೆ ಈ ರೀತಿ ಸಂಕಲ್ಪಮಾಡಿಕೊಳ್ಳುವುದು.

ಉಪಾವರೋಹ ಜಾತವೇದಃ ಪುನಸ್ತ್ವಂ । ದೇವೇಭ್ಯೋ ಹವ್ಯಂ ವಹನಃ ಪ್ರಜಾನನ್ । ಆಯುಃ ಪ್ರಜಾಗ್ಂ ರಯಿಮಸ್ಮಾಸು ಧೇಹಿ । ಅಜಸ್ರೋ ದೀದಿಹಿನೋ ದುರೋಣೇ । ಇತಿ ಗುಹ್ಯಸ್ಥಿತಮಗ್ನಿಂ । ನಾಸ ಪೂರ್ವಕಂ ಸಮಿಧಾ ಆಕೃಷ್ಯ ।

ಓಂ ಭೂರ್ಭುವಸ್ಸುವರೋಂ - ಇತ್ಯಗ್ನಿಂ ಪ್ರತಿಷ್ಠಾಪ್ಯ ॥

ಪುನಸ್ಸಂಧಾನಮಾಡಿ ಅಗ್ನಿಪ್ರತಿಷ್ಠೆಯಾಗಿಯೇ ಇರುತ್ತದೆ. ಅಗ್ನಿ ಪ್ರತಿಷ್ಠೆ ಮಾಡಿದಂತೆ ಭಾವಿಸಿಕೊಳ್ಳುವುದು.

ಓಂ ಚತ್ವಾರಿ ಶೃಂಗಾ ತ್ರಯೋ ಅಸ್ಯ ಪಾದಾ ದ್ವೇ ಶೀರ್ಷೇ ಸಪ್ತಹಸ್ತಾಸೋ ಅಸ್ಯ । ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋದೇವೋ ಮರ್ತ್ಯಾಗ್ಂ ಆವಿವೇಶ ॥

ಅಗ್ನಿಂ ಧ್ಯಾಯಾಮಿ ।
ಈ ಮಂತ್ರದಿಂದ ಅಗ್ನಿಯನ್ನು ಧ್ಯಾನಿಸುವುದು.

ಏಷ ಹಿ ದೇವಃ ಪ್ರದಿಶೋನು ಸರ್ವಾಃ ಪೂರ್ವೋ ಹಿ ಜಾತಸ್ಸ ಉ ಗರ್ಭೇ ಅಂತಃ । ಸವಿಜಾಯಮಾನಸ್ಸ ಜನಿಷ್ಯಮಾಣಃ ಪ್ರತ್ಯಙ್ಮುಖಾಸ್ತಿಷ್ಠತಿ ವಿಶ್ವತೋ-ಮುಖಃ ॥

ಹೇ ಅಗ್ನೇ ! ಪ್ರಾಙ್ಮುಖೋ ದೇವ । ಪ್ರತ್ಯಙ್ಮುಖಸ್ಸನ್ ಮಮ ಅಭಿಮುಖೋ ಭವ ।
ಈ ಮಂತ್ರವನ್ನು ಹೇಳುತ್ತಾ ನೀರು ಅಕ್ಷತೆಗಳನ್ನು ಅಗ್ನಿಗೆ ಪೂರ್ವದಿಕ್ಕಿನಲ್ಲಿ

ಅರ್ಘ್ಯಕೊಟ್ಟು ನಂತರ ಅಗ್ನಿಯ ಪೂರ್ವದಿಕ್ಕಿನಿಂದ ನಮ್ಮ ಕಡೆಗೆ, ಎರಡು ಕೈಗಳಿಂದಲೂ ಬೀಸಿಕೊಂಡು ಆಹ್ವಾನಿಸುವುದು.

ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥

ಪ್ರಾಗಾದಿ ಪರಿಮೃಜ್ಯ ।
ಪುಟ 4 ರಲ್ಲಿರುವಂತೆ.

ಅಲಂಕೃತ್ಯ ।

ಅಗ್ನಯೇ ನಮಃ । ಜಾತವೇದಸೇ ನಮಃ । ಸಹೋಜಸೇ ನಮಃ । ಅಜಿರಾಪ್ರಭವೇ ವೈಶ್ವಾನರಾಯ ನಮಃ । ನರ್ಯಾಪಸೇ ನಮಃ । ಪಂಕ್ತಿರಾಧಸೇ ನಮಃ । ವಿಸರ್ಪಿಣೇ ನಮಃ । ಮಧ್ಯೇ ಶ್ರೀ ಯಜ್ಞಪುರುಷಾಯ ನಮಃ ॥

ಚಿತ್ರ. 2 ರಲ್ಲಿ ತೋರಿಸಿರುವಂತೆ ಎಂಟು ದಿಕ್ಕುಗಳಲ್ಲಿ ಅಗ್ನಿಯನ್ನು ತೊಳೆದ ಅಕ್ಕಿಯಿಂದ ಪೂಜಿಸುವುದು.

ಪರಿಸ್ತೀರ್ಯ । ಪ್ರಾಗಾದಿ ಪ್ರದಕ್ಷಿಣಾಕಾರಂ ದಕ್ಷಿಣೋತ್ತರೈಃ ಉತ್ತರಾಧರೈಃ ಪ್ರಾಗುದಗಗ್ರೈಃ ದರ್ಭೈಃ ಅಗ್ನಿಂ ಪರಿಸ್ತೃಣಾತಿ ॥

ಪರಿಸ್ತರಣವಿದ್ದೇ ಇರುತ್ತದೆ. ಅವುಗಳನ್ನು ಸುಮ್ಮನೆ ಮುಟ್ಟಿದರೆ ಸಾಕು.

ಓಂ ಅದಿತೇಽನುಮನ್ಯಸ್ವ - ಇತಿ ದಕ್ಷಿಣತಃ ಪ್ರಾಚೀಂ ಪ್ರತಿ । ಓಂ ಅನುಮತೇಽನುಮನ್ಯಸ್ವ - ಇತಿ ಪಶ್ಚಾದುದೀಚೀಂ ಪ್ರತಿ । ಸರಸ್ವತೇಽನು ಮನ್ಯಸ್ವ - ಇತಿ ಉತ್ತರತಃ ಪ್ರಾಚೀಂ ಪ್ರತಿ । ದೇವಸವಿತಃ ಪ್ರಸುವ ॥ ಇತಿ ಸಮಂತಂ ಪ್ರದಕ್ಷಿಣಾಕಾರಂ ಪರಿಷಿಚ್ಯ ॥

ಅಗ್ನಿಯ ಸುತ್ತಲೂ ಮೊದಲಿನಂತೆ ಪರಿಷೇಚಿಸುವುದು.

ತಂಡುಲೈರ್ಜುಹುಯಾತ್ ।

ಹೋಮದ್ರವ್ಯವಾದ ತೊಳೆದ ಅಕ್ಕಿಯಿಂದ ಹೋಮಮಾಡುವುದಕ್ಕೆ ಸಿದ್ಧವಾಗುವುದು.

ತಂಡುಲಾನ್ ಗಾಯತ್ರ್ಯಾ ಪ್ರೋಕ್ಷ್ಯ । ಪ್ರಕ್ಷಾಳಿತ ತಂಡುಲಾನ್ ಅಭಿಘಾರ್ಯ - ಭಾಗದ್ವಯಂ ಕೃತ್ವಾ । ಪ್ರಥಮಭಾಗಂ ಗೃಹೀತ್ವಾ ।

ಓಂ ಸೂರ್ಯಾಯ ಸ್ವಾಹಾ । ಸೂರ್ಯಾಯೇದಂ ನಮಮ ।

ಮಧ್ಯೇಽಗ್ನೌ ಜುಹೋತಿ ॥

ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಿದ ತೊಳೆದ ಅಕ್ಕಿಯನ್ನು ಒಂದು ಬೊಗಸೆಯಲ್ಲಿ ತೆಗೆದುಕೊಂಡು ಅದಕ್ಕೆ ಅಭಿಘಾರಮಾಡಿ, ಅದನ್ನು ಎರಡು ಭಾಗ ಮಾಡಿಕೊಂಡು ಮೊದಲ ಭಾಗದ ಅಕ್ಕಿಯನ್ನು ಬಲಗೈಲಿ ಹಿಡಿದುಕೊಂಡು ಈ ಮಂತ್ರವನ್ನು ಹೇಳುತ್ತಾ ಅಗ್ನಿಯ ಮಧ್ಯಭಾಗದಲ್ಲಿ ಹೋಮಮಾಡುವುದು.

ದ್ವಿತೀಯ ಭಾಗಂ ಗೃಹೀತ್ವಾ ।

ಅಗ್ನಯೇ ಸ್ವಿಷ್ಟಕೃತೇ ಸ್ವಾಹಾ ॥ ಅಗ್ನಯೇ ಸ್ವಿಷ್ಟಕೃತ ಇದಂ ನಮಮ ।

ಅಗ್ನೇರುತ್ತರ ಪೂರ್ವದೇಶೇ ಜುಹೋತಿ ॥

ಉಳಿದ ಅಕ್ಕಿಯನ್ನು ಬಲಗೈಗೆ ಹಾಕಿಕೊಂಡು ಈ ಮಂತ್ರದಿಂದ ಅಗ್ನಿಯ ಈಶಾನ್ಯ ಭಾಗದಲ್ಲಿ ಹೋಮ ಮಾಡುವುದು.

* ಆಹುತಿ ಸಂಸರ್ಗ ದೋಷ ಪ್ರಾಯಶ್ಚಿತ್ತಾರ್ಥಂ ವನಸ್ಪತಿ ಹೋಮಂ ಕರಿಷ್ಯೇ :-

ಯತ್ರ ವೇತ್ಥ ವನಸ್ಪತೇ ದೇವಾನಾಂ ಗುಹ್ಯಾ ನಾಮಾನಿ । ತತ್ರ ಹವ್ಯಾನಿ ಗಾಮಯ ಸ್ವಾಹಾ ॥ ವನಸ್ಪತಯ ಇದಂ ನಮಮ ॥

ಈ ಮಂತ್ರದಿಂದ ಆಹುತಿ ಸಂಸರ್ಗದೋಷ ಪ್ರಾಯಶ್ಚಿತ್ತಕ್ಕಾಗಿ ಒಂದು ಸಮಿತ್ತನ್ನು ಅಥವಾ ಎರಡು ತುಂಡು ದರ್ಭೆಗಳನ್ನು ತುಪ್ಪದಲ್ಲಿ ಅದ್ದಿ ಹೋಮ ಮಾಡಬೇಕು.

ಸರ್ವಪ್ರಾಯಶ್ಚಿತ್ತಾರ್ಥಂ ಓಂ ಭೂರ್ಭುವಸ್ಸುವಸ್ಸ್ವಾಹಾ । ಪ್ರಜಾಪತಯ ಇದಂ ನಮಮ ॥

ಸರ್ವಪ್ರಾಯಶ್ಚಿತ್ತಾರ್ಥವಾಗಿ ಸ್ರುವದಿಂದ ಒಂದು ಸಾರಿ ಹೋಮ ಮಾಡಬೇಕು.

ವೈಶ್ವಾನರಾಯ ವಿದ್ಮಹೇ ಲಾಲೀಲಾಯ ಧೀಮಹಿ । ತನ್ನೋ ಅಗ್ನಿಃ ಪ್ರಚೋದಯಾತ್ ॥

ಇತಿ ಯಥಾಶಕ್ತಿ ಅಗ್ನಿ ಗಾಯತ್ರೀ ಜಪಂ ಕರಿಷ್ಯೇ (ಯಾವತ್ಕಾಲಂ ತಂಡುಲಾಃ ಪಚ್ಯಂತೇ - ತಾವತ್ಕಾಲಂ ಜಪಂ ಕುರ್ಯಾತ್ - ದಶವಾರಮಿತಿ ಕೇಚಿತ್) ।

* ಹಿಂದಿನ ದಿನದ ಸಾಯಂ ಔಪಾಸನ ಹಾಗೂ ಇಂದಿನ ದಿನದ ಪ್ರಾತರೌಪಾಸನೆಯನ್ನು ಒಟ್ಟಿಗೆ ಮಾಡಿದರೆ ಮಾತ್ರ ಆವರಣದಲ್ಲಿರುವ ಭಾಗವನ್ನು ಹೇಳಬೇಕು. ಬರೀ ಪ್ರಾತರೌಪಾಸನ ಮಾಡಿದರೆ ಈ ಭಾಗ ಬೇಕಾಗಿಲ್ಲ.

ಈ ಮಂತ್ರವನ್ನು 10 ಬಾರಿ ಜಪಿಸುವುದು. (ಅವಕಾಶವಿದ್ದಲ್ಲಿ ಹೋಮಮಾಡಿದ ತಂಡುಲ ಪಚನವಾಗುವವರಗೂ ಜಪ ಮಾಡುವುದು).

ಓಂ ಅದಿತೇಽನ್ವಮಗ್ಂಸ್ಥಾಃ । ಅನುಮತೇಽನ್ವಮಗ್ಂಸ್ಥಾಃ । ಸರಸ್ವತೇಽನ್ವಮಗ್ಂ ಸ್ಥಾಃ । ದೇವ ಸವಿತಃ ಪ್ರಾಸಾವೀಃ ॥

ಈ ಮಂತ್ರದಿಂದ ಹೋಮಕುಂಡದ ಸುತ್ತಲೂ ನೀರಿನಿಂದ ಮೊದಲಿನಂತೆ ಪರಿಷೇಚನೆ ಮಾಡುವುದು.

ಅಗ್ನೇ ತ್ವನ್ನೋ ಅಂತಮಃ । ಉತ ತ್ರಾತಾ ಶಿವೋ ಭವ ವರೂಥ್ಯಃ । ತಂ ತ್ವಾ ಶೋಚಿಷ್ಠ ದೀದಿವಃ । ಸುಮ್ನಾಯನೂ ನಮೀಮಹೇ ಸಖಿಭ್ಯಃ । ವಸುರಗ್ನಿರ್ವಸುಶ್ರವಾಃ । ಅಚ್ಛಾನಕ್ಷಿದ್ಯುಮತ್ತಮೋರಯಿಂದಾಃ । ಸ ನೋ ಬೋಧಿಶ್ರುಧೀಹವ ಮುರುಷ್ಯಾಣೋ ಅಘಾಯತಸ್ಸಮಸ್ಮಾತ್ ॥

ಈ ಮಂತ್ರದಿಂದ ಅಗ್ನಿಯನ್ನು ಸ್ತೋತ್ರ ಮಾಡುವುದು.

ಸ್ವಸ್ತಿ ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ ಆಯುಷ್ಯಂ ತೇಜಃ ಆರೋಗ್ಯಂ ದೇಹಿ ಮೇ ಹವ್ಯವಾಹನ । ಶ್ರಿಯಂ ದೇಹಿ ಮೇ ಹವ್ಯವಾಹನ ಓಂ ನಮ ಇತಿ ॥

ಚತುಸ್ಸಾಗರಪರ್ಯಂತಂ ಶರ್ಮಾ ಅಹಂ ಭೋ ಅಭಿವಾದಯೇ ॥

ಪ್ರವರಪೂರ್ವಕವಾಗಿ ಯಜ್ಞೇಶ್ವರನಿಗೆ ಈ ಮಂತ್ರದಿಂದ ನಮಸ್ಕಾರ ಮಾಡುವುದು.

ಓಂ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಪ್ರಾತರೌಪಾಸನ ಹೋಮ ಸಾದ್ಗುಣ್ಯಾರ್ಥಂ ಅನಾಜ್ಞಾತತ್ರಯ ಮಂತ್ರಜಪಂ ಕರಿಷ್ಯೇ ॥

ಅನಾಜ್ಞಾತಂ ಯದಾಜ್ಞಾತಂ ಯಜ್ಞಸ್ಯ ಕ್ರಿಯತೇ ಮಿಥು । ಅಗ್ನೇ ತದಸ್ಯ ಕಲ್ಪಯ ತ್ವಗ್ಂ ಹಿ ವೇತ್ಥ ಯಥಾ ತಥಮ್ ॥ ಪುರುಷ ಸಂಮಿತೋ ಯಜ್ಞೋ ಯಜ್ಞಃ ಪುರುಷ ಸಮ್ಮಿತಃ । ಅಗ್ನೇ ತದಸ್ಯ ಕಲ್ಪಯ ತ್ವಗ್ಂ ಹಿ ವೇತ್ಥ ಯಥಾತಥಮ್ ॥

ಯತ್ಪಾಕತ್ರಾ ಮನಸಾ ದೀನದಕ್ಷಾ ನ ಯಜ್ಞಸ್ಯ ಮನ್ವತೇ ಮರ್ತಾಸಃ । ಅಗ್ನಿಷ್ಟದ್ಧೋತಾಕ್ರತು ವಿದ್ವಿಜಾನನ್ ಯಜಿಷ್ಠೋ ದೇವಾಗ್ಂ ಋತುಶೋ ಯಜಾತಿ ॥ ಇದಂ ವಿಷ್ಣುರ್ವಿಚಕ್ರಮೇ । ತ್ರೇಧಾ ನಿದಧೇ ಪದಂ । ಸಮೂಢಮಸ್ಯಪಾಗ್ಂ ಸುರೇ ॥

ಈ ರೀತಿ ಸಂಕಲ್ಪಿಸಿ, ಔಪಾಸನ ಸಾದ್ಗುಣ್ಯಾರ್ಥಕ್ಕಾಗಿ, ಈ ಅನಾಜ್ಞಾತತ್ರಯ ಮಂತ್ರವನ್ನು ಪಠಿಸುವುದು.

ಹೋಮಾಂತೇ ಶ್ರೀ ಯಜ್ಞೇಶ್ವರಾಯ ನಮಃ । ಸರ್ವೋಪಚಾರ ಪೂಜಾಂ ಸಮರ್ಪಯಾಮಿ । ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥

ಯಜ್ಞೇಶ್ವರನಿಗೆ ಈ ಮಂತ್ರಹೇಳಿಕೊಂಡು ಅಕ್ಷತೆಯಿಂದ ಪೂಜೆ ಮಾಡುವುದು.

ಶ್ರೀ ಯಜ್ಞಪುರುಷಾಯ ನಮಃ । ಆಜ್ಯೋಪಹಾರ ನೈವೇದ್ಯಂ ನಿವೇದಯಾಮಿ ॥

ದೊನ್ನೆಯಲ್ಲಿನ ತುಪ್ಪದಿಂದ ಸ್ವಲ್ಪ ತುಪ್ಪ ತೆಗೆದುಕೊಂಡು ನಿವೇದನ ಮಾಡುವುದು. ನಂತರ ಮಂತ್ರಾಕ್ಷತೆಯಿಂದ ಪೂಜಿಸುವುದು.

(ಈ ಅಗ್ನಿಯೇ ಮುಂದೆ ದಕ್ಷಿಣಾಗ್ನಿಯಾಗಿ ಮಾರ್ಪಾಟು ಹೊಂದಿ 'ಅಗ್ನೌಕರಣಕ್ಕೆ' ಬೇಕಾಗಿರುವುದರಿಂದ ಇದನ್ನು ಈಗ ವಿಸರ್ಜಿಸಬೇಕಾಗಿಲ್ಲ.)

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋ ಹೋಮಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ।
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಹುತಾಶನ ।
ಯದ್ಧುತಂತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಮಯಾ ಕೃತೇನ - ಅದ್ಯ ಪ್ರಾತರೌಪಾಸನ ಹೋಮೇನ, ಭಗವಾನ್ ಸರ್ವಾತ್ಮಕಃ ಸರ್ವಂ ಶ್ರೀ ಯಜ್ಞೇಶ್ವರಃ ಪ್ರೀಣಾತು ॥

ಈ ಮಂತ್ರ ಹೇಳಿ ಉದ್ಧರಣೆಯಿಂದ ನೀರು ಬಿಡುವುದು.

(ಕೈಗೆ ಸಿಕ್ಕಿಸಿಕೊಂಡಿದ್ದ ಎರಡು ದರ್ಭೆಯ ಪವಿತ್ರವನ್ನು ತೆಗೆದು, ಆಜ್ಯಪಾತ್ರೆ, ದರ್ವಿ, ಸ್ರುವಗಳ ಜೊತೆಯಲ್ಲಿ ಅಗ್ನಿಕುಂಡದ ಉತ್ತರದಿಕ್ಕಿನಲ್ಲಿ ಸರಿಯಾಗಿಟ್ಟು, ಶ್ರಾದ್ಧ ಪ್ರಾರಂಭ ಮಾಡಬೇಕು. ಶ್ರಾದ್ಧ ಪೂರೈಸುವವರೆಗೂ ಅಗ್ನಿಯು ಆರಿಹೋಗದಂತೆ ಇಂಧನವನ್ನು ಹಾಕುತ್ತಾ ನೋಡಿಕೊಳ್ಳುತ್ತಿರಬೇಕು).

॥ಓಂ ತತ್ಸತ್॥

# ಅಥ ಯಾಜುಷ ಶ್ರಾದ್ಧ ಪ್ರಯೋಗಃ ಪ್ರಾರಮ್ಭಃ

ಶ್ರಾದ್ಧೋಪಯೋಗ ಸಿದ್ಧಪದಾರ್ಥಾನ್ ಆದಾಯ ।



ಅಗ್ರದ ಬಾಳೆ ಎಲೆ
ಚಿತ್ರ 4. ಪೂರ್ವಭಾವಿ ಸಿದ್ಧತೆಗಳು

ಪೂರ್ವಭಾವಿಯಾಗಿ, ಶ್ರಾದ್ಧದ ಉಪಯೋಗಕ್ಕಾಗಿ ಈ ಮೇಲಿನ ಚಿತ್ರದ ಸಂಖ್ಯೆಯಲ್ಲಿ ತೋರಿಸಿರುವ ಸ್ಥಳಗಳಲ್ಲಿ ಒಂದು ಅಗ್ರದ ಬಾಳೆ ಎಲೆಯ ಮೇಲೆ ಸಾಮಾನುಗಳನ್ನು ಸಿದ್ಧಪಡಿಸಿಕೊಂಡಿರಬೇಕು.

1. ತೊಳೆದ ಅಕ್ಕಿ. 2. ಕರಿ ಎಳ್ಳು. 3. ತುಳಸಿ ದಳಗಳು, ಬಿಡಿಹೂವು (ಮಲ್ಲಿಗೆ, ಸೇವಂತಿಗೆ, ಸುಗಂಧರಾಜ, ಮಲ್ಲೀ ಹೂವುಗಳು ಮತ್ತು ದರ್ಭೆ ಚೂರುಗಳು). 4. ತೇದ ಶ್ರೀಗಂಧ. 5. ಕಲಶಕ್ಕೆ, ಬ್ರಹ್ಮದಂಡಕ್ಕೆ, ಬ್ರಾಹ್ಮಣರಿಗೆ ಎಡೆ ಧಾರೆ ಎರೆಯುವುದಕ್ಕೆ ಬೇಕಾಗುವ ನಾಣ್ಯಗಳು. 6. ೨೦ ಬಿಡಿ ದೊನ್ನೆಗಳು. 7. ಉದ್ದವಾದ ದರ್ಭೆಗಳ ಕಂತೆ. 8. ತುಂಡು ದರ್ಭೆಗಳ ಕಂತೆ. 9. ಕೂರ್ಚ ೧ (೭ ದರ್ಭೆಗಳಿಂದ ಕಟ್ಟಿದ್ದು). 10. ೧೦ ಬಾಳೆ ಎಲೆ. 11. ಮೂರು ದರ್ಭೆಗಳ ಪವಿತ್ರ ೬ (ಉಚ್ಛಿಷ್ಟಪಿಂಡ ಆದಮೇಲೆ ೧, ಪ್ರಾರಂಭದಲ್ಲಿ ೧, ಪಾದಪ್ರಕ್ಷಾಳನ ಆದಮೇಲೆ ೧, ಚರುಸೇವನೆ ಆದಮೇಲೆ ೧, ತರ್ಪಣಕ್ಕೆ ೧, ವಿಷ್ಟರಕ್ಕೆ ೧).

ಇವಲ್ಲದೆ ಅರ್ಘ್ಯ ಪಾತ್ರ, ತಾಮ್ರದ ಪಂಚಪಾತ್ರೆ, ಉದ್ಧರಣೆ, ತಾಮ್ರದ ದೊಡ್ಡ ಚಂಬು, ತಾಮ್ರದ ದೊಡ್ಡ ಉದ್ಧರಣೆ, ಒಂದು ದೊಡ್ಡ ಪಾತ್ರೆಯಲ್ಲಿ ನೀರು ಇವುಗಳು ಬೇಕು.

## ಅಥ ಯಾಜುಷ ಸಾಂವತ್ಸರೀಕ ಶ್ರಾದ್ಧಮಂತ್ರ ಪ್ರಾರಂಭಃ

ಆಚಮ್ಯ ।

ಪೂರ್ವಾಭಿಮುಖವಾಗಿ ಕುಳಿತು ಆಚಮನ ಮಾಡಬೇಕು.

ಓಂ ಪವಿತ್ರವಂತಃ ಪರಿವಾಜಮಾಸತೇ । ಪಿತೈಷಾಂ ಪ್ರತ್ನೋ ಅಭಿರಕ್ಷತಿ ವ್ರತಂ ।
ಮಹಸ್ಸಮುದ್ರಂ ವರುಣಸ್ತಿರೋದಧೇ । ಧೀರಾ ಇಚ್ಛೇ ಕುರ್ಧರುಣೇಷ್ವಾರಭಂ ।

ಪ॒ವಿತ್ರಂ॑ ತೇ॒ ವಿತ॑ತಂ ಬ್ರಹ್ಮಣಸ್ಪತೇ । ಪ್ರಭು॒-ರ್ಗಾತ್ರಾ॑ಣಿ॒ ಪರ್ಯೇ॑ಷಿ ವಿ॒ಶ್ವತಃ॑ । ಅತ॑ಪ್ತತನೂ॒ರ್ನತ ದಾ॒ಮೋ ಅ॑ಶ್ನುತೇ । ಶ್ರೃ॒ತಾ ಸ॒ ಇದ್ವಹ॑ಂತ॒ಸ್ತತ್ಸಮಾ॑ಶತ ॥

ಪವಿತ್ರಂ ಧೃತ್ವಾ ।

ಈ ಮಂತ್ರ ಹೇಳಿಕೊಂಡು (ಶ್ರಾದ್ಧ ಮಾಡಬೇಕಾದವರೆಲ್ಲರೂ) 3 ಉದ್ದವಾದ ದರ್ಭೆಗಳಿಂದ ಕಟ್ಟಿದ ಪವಿತ್ರವನ್ನು ಬಲ ಅನಾಮಿಕಾ ಬೆರಳಿಗೆ ಉಂಗುರದಂತೆ ಧರಿಸುವುದು.

ಪ್ರಾಣಾಯಮ್ಯ ।

ಓಂ ಭೂಃ । ಓಂ ಭುವಃ । ಓಗ್‌ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಗ್‌ಂ ಸ॒ತ್ಯಂ । ಓಂ ತತ್ಸ॑ವಿ॒ತುರ್ವರೇ॑ಣ್ಯಂ॒ ಭರ್ಗೋ॑ ದೇ॒ವಸ್ಯ॑ ಧೀಮಹಿ । ಧಿಯೋ॒ ಯೋ ನಃ॑ ಪ್ರಚೋ॒ದಯಾ॑ತ್ ॥ ಓಂ ಆಪೋ॒ ಜ್ಯೋತೀ॒ರಸೋ॒ಽಮೃತಂ॒ ಬ್ರಹ್ಮ॒ ಭೂರ್ಭುವ॒ಸ್ಸುವ॒ರೋಮ್ ॥

ಪೂರ್ವಾಭಿಮುಖವಾಗಿ ಕುಳಿತು ಈ ರೀತಿ ಪ್ರಾಣಾಯಾಮ ಮಾಡಿ.

ಶ್ರೀ ಗೋವಿಂದ ಗೋವಿಂದ ಗೋವಿಂದ ಶ್ರೀಮನ್ಮಹಾವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಅಷ್ಟಾವಿಂಶತಿ ತಮೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ ಚಾಂದ್ರಮಾನೇನ ಪ್ರಭವಾದಿ ಷಷ್ಟಿಸಂವತ್ಸರಾಣಾಂ ಮಧ್ಯೇ .......... ನಾಮಸಂವತ್ಸರೇ ........ ಅಯನೇ .......... ಋತೌ ............ ಮಾಸೇ .......... ಪಕ್ಷೇ .......... ಪುಣ್ಯತಿಥೌ ........... ವಾಸರಯುಕ್ತಾಯಾಂ ವಿಷ್ಣುನಕ್ಷತ್ರ ವಿಷ್ಣುಯೋಗ ವಿಷ್ಣುಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಪ್ರಾಚೀನಾವೀತೀ ॥

ಸಂಕಲ್ಪದ ಮಂತ್ರವನ್ನು ಹೇಳಿ ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳುವುದು.

ಅಸ್ಮತ್ಪಿತುಃ / ಅಸ್ಮನ್ಮಾತುಃ ಪ್ರತಿ ಸಾಂವತ್ಸರೀಕ ಮೃತಾಹಾನ್ನಶ್ರಾದ್ಧೇ, ಆದೌ ಆತ್ಮ, ದ್ರವ್ಯ, ಸ್ಥಲ ಶುದ್ಧ್ಯರ್ಥಂ ಕರ್ತೃ, ಭೋಕ್ತೃ ಶುದ್ಧ್ಯರ್ಥಂ ಕಾಲಾತೀತ ದೋಷ ಪ್ರಾಯಶ್ಚಿತ್ತಾರ್ಥಂ । ಸವ್ಯೇನ । ಕೂಶ್ಮಾಂಡಸೂಕ್ತ ಮಂತ್ರಪಠನಂ ಕರಿಷ್ಯೇ । ತದಂಗಂ ವರ್ತುಲಾಕಾರಮಂಡಲಪೂರ್ವಕ ಕಲಶಸ್ಥಾಪನಂ ಕರಿಷ್ಯೇ ॥

ಅನಂತರ, ಈ ರೀತಿ ಸಂಕಲ್ಪದ 'ಪ್ರಾಯಶ್ಚಿತ್ತಾರ್ಥಂ' ವರೆಗಿನ ಮಂತ್ರವನ್ನು ಹೇಳುವುದು. ಮೊದಲು ಜನಿವಾರವನ್ನು ಎಡಕ್ಕೆ ಹಾಕಿಕೊಂಡು ವರ್ತುಲಾಕಾರ ಮಂಡಲವನ್ನು ಮಾಡಿ ಅದರ ಮೇಲೆ ಎಳ್ಳು ನೀರು ಬಿಡಬೇಕು. ನಂತರ ಜನಿವಾರವನ್ನು ಬಲಕ್ಕೆ ಹಾಕಿಕೊಂಡು ಚತುರಶ್ರ ಮಂಡಲವನ್ನು ಮಾಡಿ ಅಕ್ಷತೆ ನೀರು ಬಿಡುವುದು.

ಸ್ಯೋನಾ ಪೃಥಿವಿ ಭವಾನೃಕ್ಷರಾ ನಿವೇಶನೀ । ಯಚ್ಛಾನಶ್ಶರ್ಮ ಸಪ್ರಥಾಃ ॥

ಇತಿ ಭೂಮಿಂ ಸಂಪ್ರಾರ್ಥ್ಯ - ವರ್ತುಲಾಕಾರ ಮಂಡಲಂ ಕೃತ್ವಾ ।

ಈ ಮಂತ್ರದಿಂದ ಭೂಮಿಯನ್ನು ಪ್ರಾರ್ಥನೆ ಮಾಡಿ ನೀರಿನಿಂದ ವರ್ತುಲಾಕಾರ ಮಂಡಲವನ್ನು ಮಾಡಿ

ಯೇನ ತೋಕಾಯ ತನಯಾಯ ಧಾನ್ಯಾ ಅಂಬೀಜಂ ವಹಧ್ವೇ ಅಕ್ಷಿತಮ್ ।

ಅಸ್ಮಭ್ಯಂ ತದ್ಧತ್ತನಯದ್ವ ಈಮಹೇರಾಧೋ ವಿಶ್ವಾಯು ಸೌಭಗಮ್ ॥

ಮಂಡಲಸ್ಯೋಪರಿ ಯವ, ತಿಲ, ದರ್ಭಾನ್ ನಿಕ್ಷಿಪ್ಯ ।

ಆ ಮಂಡಲದ ಮೇಲೆ, ಈ ಮಂತ್ರವನ್ನು ಹೇಳಿಕೊಂಡು 3 ತುಂಡು ದರ್ಭೆ, ತೋಳದಕ್ಕಿ, ಎಳ್ಳು ಇವುಗಳನ್ನಿಟ್ಟು

ಆಕಲಶೇಷು ಧಾವತಿ ಶ್ಯೇನೋವರ್ಮವಿಗಾಹತೇ । ಅಭಿದ್ರೋಣಾ ಕನಿಕ್ರದತ್ ॥

ತಸ್ಯೋಪರಿ ಉದಕಪೂರಿತ ಕಲಶಂ ನಿಧಾಯ ।

ಈ ಮಂತ್ರದಿಂದ ಆ ಮಂಡಲದ ಮೇಲೆ ಜಲಪೂರಿತ ತಾಮ್ರದ ಚಂಬನ್ನು ಇಡಬೇಕು.

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಗ್ಂ ಸಚತಾ ಪರುಷ್ಣಿಯಾ । ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ಅಸ್ಮಿನ್ ಕಲಶೇ ಗಂಗಾದಿ ಸರ್ವತೀರ್ಥಾನ್ ಆಕೃಷ್ಯ ।

ಕಲಶವನ್ನು ಬಲಗೈಲಿ ಮುಚ್ಚಿಕೊಂಡು ಈ ಮಂತ್ರದಿಂದ ಆ ಕಲಶದ ಜಲದಲ್ಲಿ ಗಂಗಾದಿ ಸರ್ವತೀರ್ಥಗಳನ್ನೂ ಆಕರ್ಷಿಸುವುದು.

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್ ।

ಇತಿ ಗಂಧಾನ್ ।

ಈ ಮಂತ್ರದಿಂದ ಕಲಶಕ್ಕೆ 3 ಕಡೆ ಪ್ರದಕ್ಷಿಣೆಯಾಗಿ ದೊನ್ನೆಯಲ್ಲಿರುವ ಗಂಧವನ್ನು ಸ್ವಲ್ಪ ಹಚ್ಚುವುದು.

ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧುಸಂಯುತಃ । ನಿರ್ಣೋದಸ್ಸರ್ವಪಾಪಾನಾಂ ಪವಿತ್ರಮೃಷಿಭಿಸ್ಸ್ಮೃತಮ್ ॥

ಇತಿ ಯವಾನ್ ।

ಈ ಮಂತ್ರದಿಂದ ಕಲಶಕ್ಕೆ ಗಂಧ ಹಚ್ಚಿದ 3 ಕಡೆಗಳಲ್ಲಿ ಪ್ರದಕ್ಷಿಣೆಯಾಗಿ ತಂಡುಲ (ತೊಳೆದ ಅಕ್ಕಿ, ಬಾಳೆ ಎಲೆಯ ಮೇಲೆ ದೊನ್ನೆಯಲ್ಲಿರುವುದು)ವನ್ನು ಹಚ್ಚುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ತಿಲೋಽಸಿ ಸೋಮದೇವತ್ಯೋ ಗೋಸವೇ ದೇವ ನಿರ್ಮಿತಃ । ಪ್ರತ್ನವದ್ಭಿಃ ಪ್ರಕ್ತ ಸ್ವಧ ಏಹಿ ॥

ಇತಿ ತಿಲಾನ್ ವಿಕೀರ್ಯ ।

ಈ ಮಂತ್ರದಿಂದ ಕಲಶಕ್ಕೆ ಗಂಧ ಹಚ್ಚಿದ ಕಡೆಗಳಲ್ಲಿ ಅಪ್ರದಕ್ಷಿಣೆಯಾಗಿ ತಿಲ (ಕರಿ ಎಳ್ಳು) ಹಚ್ಚುವುದು.

ಉಪವೀತಿ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಸಹಿರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ । ತಂ ಭಾಗಂ ಚಿತ್ರಮೀಮಹೇ ॥

ಇತಿ ಹಿರಣ್ಯಂ ನಿಕ್ಷಿಪ್ಯ ॥

ಈ ಮಂತ್ರದಿಂದ ಕಲಶಕ್ಕೆ ದಕ್ಷಿಣೆ ಹಾಕಬೇಕು.

ಕಾಂಡಾತ್ಕಾಂಡಾತ್ಪ್ರರೋಹಂತೀ ಪರುಷಃ ಪರುಷಃ ಪರಿ । ಏವಾನೋ ದೂರ್ವೇ ಪ್ರತನು ಸಹಸ್ರೇಣ ಶತೇನ ಚ ॥

ದರ್ಭ ಶ್ರೀ ತುಲಸೀ ದರ್ಭಪತ್ರಾಸ್ಯಾಚ್ಛಾದ್ಯ ॥

ಇತಿ ಕೂರ್ಚಮ್ ॥

ಈ ಮಂತ್ರದಿಂದ ಕಲಶದಲ್ಲಿ 'ಕೂರ್ಚ'ವನ್ನು ಇರಿಸುವುದು.

(ದರ್ಭೆಯಿಂದ ಕಟ್ಟಿದ, ಉದ್ಧರಣೆಗೆ ಪ್ರತಿಯಾಗಿ ಇರಿಸಿದ ಈ ದರ್ಭೆ-ಚಮಚಕ್ಕೆ ಕೂರ್ಚ ಎಂದು ಹೆಸರು. ಇದನ್ನು ಕಟ್ಟಲು 7 ಉದ್ದವಾದ ದರ್ಭೆಗಳನ್ನು ಉಪಯೋಗಿಸಬೇಕು).

ಓಂ ದೇವಸ್ಯ ತ್ವಾ ಸವಿತುಃ ಪ್ರಸವೇ । ಅಶ್ವಿನೋರ್ಬಾಹುಭ್ಯಾಮ್ । ಪೂಷ್ಣೋ ಹಸ್ತಾಭ್ಯಾಮ್ ॥ ದಶಗಾಯತ್ರೀಂ ಜಪೇತ್ ॥

ಅನಂತರ ಕಲಶವನ್ನು ಪುನಃ ಬಲದ ಕೈಯಲ್ಲಿ ಮುಚ್ಚಿಕೊಂಡು ಈ ಮಂತ್ರಗಳನ್ನು ಹೇಳಿಕೊಂಡು 10 ಸಾರಿ ಗಾಯತ್ರೀ ಮಂತ್ರವನ್ನು ಜಪಿಸಬೇಕು.

ಆತ್ಮ, ದ್ರವ್ಯ, ಸ್ಥಲಶುದ್ಧ್ಯರ್ಥಂ, ಕರ್ತೃ, ಭೋಕ್ತೃ, ಭಾಂಡ, ಭಾಜನ ಶುದ್ಧ್ಯರ್ಥಂ ಕೂಷ್ಮಾಂಡಸೂಕ್ತ ಮಂತ್ರಪಠನಂ ಕರಿಷ್ಯೇ ॥

ಆತ್ಮ, ದ್ರವ್ಯ, ಸ್ಥಳ, ಕರ್ತೃ, ಭೋಕ್ತೃ, ಭಾಂಡ, ಭಾಜನಗಳ ಶುದ್ಧಿಗಾಗಿ ಕೂಷ್ಮಾಂಡ ಸೂಕ್ತ ಮಂತ್ರವನ್ನು ಪಠಿಸಬೇಕು.

ಓಂ ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಬೃಹತೇ ಕರೋಮಿ ॥

ಕೂಷ್ಮಾಣ್ಡೈರ್ಜುಹುಯಾದ್ಯೋಽಪೂತ ಇವ ಮನ್ಯೇತ ಯಥಾಸ್ತೇನೋ ಯಥಾ ಭ್ರೂಣಹೈವಮೇಷ ಭವತಿ ಯೋಽಯೋನೌ ರೇತಸ್ಸಿಞ್ಚತಿ ಯದರ್ವಾಚೀನಮೇನೋ ಭ್ರೂಣಹತ್ಯಾಯಾಸ್ತಸ್ಮಾನ್ಮುಚ್ಯತೇ ಯಾವದೇನೋ ದೀಕ್ಷಾಮುಪೈತಿ ದೀಕ್ಷಿತ ಏತಸ್ಸತತಿ ಜುಹೋತಿ ಸಂವತ್ಸರಂ ದೀಕ್ಷಿತೋ ಭವತಿ ಸಂವತ್ಸರಾದೇವಾತ್ಮಾನಂ ಪುನೀತೇ ಮಾಸಂ ದೀಕ್ಷಿತೋ ಭವತಿ ಯೋ ಮಾಸಸ್ಸ ಸಂವತ್ಸರಸ್ಸಂವತ್ಸರಾ-ದೇವಾತ್ಮಾನಂ ಪುನೀತೇ ಚತುರ್ವಿಗ್ಂಶತಿಗ್ಂ ರಾ ೯ ೇಕ್ಷಿತೋ ಭವತಿ

ಚತುರ್ವಿಗ್ಂಶತಿರರ್ಧಮಾಸಾಸ್ಸಂವತ್ಸರಸ್ಸಂವತ್ಸರಾದೇವಾತ್ಮಾನಂ ಪುನೀತೇ ದ್ವಾದಶರಾತ್ರೀರ್ದೀಕ್ಷಿತೋ ಭವತಿ ದ್ವಾದಶಮಾಸಾಸ್ಸಂವತ್ಸರಸ್ಸಂವತ್ಸರಾದೇವಾತ್ಮಾನಂ ಪುನೀತೇ ಷಡ್ರಾತ್ರೀರ್ದೀಕ್ಷಿತೋ ಭವತಿ ಷಡ್ವಾ ಋತವಸ್ಸಂವತ್ಸರಸ್ಸಂವತ್ಸರಾದೇವಾತ್ಮಾನಂ ಪುನೀತೇ ತಿಸ್ರೋ ರಾತ್ರೀರ್ದೀಕ್ಷಿತೋ ಭವತಿ ತ್ರಿಪದಾ ಗಾಯತ್ರೀ ಗಾಯತ್ರಿಯಾ ಏವಾತ್ಮಾನಂ ಪುನೀತೇ ನ ಮಾಗ್ಂಸಮಶ್ನೀಯಾನ್ನ ಸ್ತ್ರಿಯಮುಪೇಯಾನ್ನೋಪರ್ಯಾಸೀತ ಜುಗುಪ್ಸೇತಾನೃತಾತ್ಪಯೋ ಬ್ರಾಹ್ಮಣಸ್ಯ ವ್ರತಂ ಯವಾಗೂ ರಾಜನ್ಯಸ್ಯಾಮಿಕ್ಷಾ ವೈಶ್ಯಸ್ಯಾಥೋ ಸೌಮ್ಯೇಽಪ್ಯಧ್ವರ ಏತದ್ವ್ರತಂ ಬ್ರೂಯಾದ್ಯದಿಮನ್ಯೇತೋಪದಸ್ಯಾಮೀತ್ಯೋದನಂಧಾನಾಸ್ಸಕ್ತೂನ್ಘೃತಮಿತ್ಯನುವ್ರತಯೇದಾತ್ಮನೋಽನುಪದಾಸಾಯ ॥೮-೧೨॥

ಓಂ ಶಾಂತಿ ಶ್ಶಾಂತಿ ಶ್ಶಾಂತಿಃ ॥

(ಕೂಶ್ಮಾಂಡಸೂಕ್ತ 'ಯದ್ದೇವಾದೇವಹೇಳನಂ' ಎಂದು ಪ್ರಾರಂಭವಾಗಿ 'ಆತ್ಮನೋಽನುಪದಾಸಾಯ' ಎಂಬುವವರೆಗೆ ಇದೆ. ಅಷ್ಟು ಹೇಳಲು ಸಾಧ್ಯವಾಗಲಾರದು ಎಂದು (ಈಗಿನ ಪರಿಸ್ಥಿತಿಗಳಲ್ಲಿ) ಭಾವಿಸಿ, ಆ ಸೂಕ್ತದ ಮುಖ್ಯವಾದ ಸ್ವಲ್ಪ ಭಾಗಗಳನ್ನು ಮಾತ್ರ ಪಠಿಸುವ ಆಚರಣೆ ಇಟ್ಟುಕೊಂಡಿರುವುದು ಇಲ್ಲಿ ಕಂಡುಬರುತ್ತದೆ.)

ಕೂಶ್ಮಾಂಡಮಂತ್ರವನ್ನು ಈ ರೀತಿ ಜಪ ಮಾಡಿ ಅನಂತರ

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।

ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಶ್ಶುಚಿಃ ॥

ಮೇಲ್ಕಂಡಂತೆ ಕೂಶ್ಮಾಂಡಮಂತ್ರವನ್ನು ಪಠಿಸಿ ಅನಂತರ ಉದ್ಧರಣೆಯಲ್ಲಿ ಕಲಶದ ನೀರನ್ನು ತೆಗೆದುಕೊಂಡು ಈ ಮಂತ್ರದಿಂದ ಶ್ರಾದ್ಧಕರ್ತೃವು ಆತ್ಮಶುದ್ಧಿಗಾಗಿ ತನ್ನನ್ನು ಕೂರ್ಚದಿಂದ ಪ್ರೋಕ್ಷಿಸಿಕೊಳ್ಳಬೇಕು.

ಅಗ್ನಿಶ್ಶುಚಿ ವ್ರತತಮಶ್ಶುಚಿರ್ವಿಪ್ರಶ್ಶುಚಿಃ ಕವಿಃ । ಶುಚೀ ರೋಚತ ಆಹುತಃ । ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಗ್ಂಷ್ಯರ್ಚಯಃ ॥

ಇನ್ನೊಂದು ಬಾರಿ ಉದ್ಧರಣೆ ನೀರನ್ನು ತೆಗೆದುಕೊಂಡು ಕೂರ್ಚದಿಂದ ಅಗ್ನಿಯನ್ನೂ, ನಿಮಂತ್ರಿತ ಬ್ರಾಹ್ಮಣರನ್ನೂ, ದ್ರವ್ಯಗಳನ್ನೂ, ಕರ್ಮ ಮಾಡುವ ಎಲ್ಲಾ ಸ್ಥಳಗಳನ್ನೂ ಶುದ್ಧಿಗಾಗಿ ಪ್ರೋಕ್ಷಿಸುವುದು.

ಸರ್ವಾಣಿ ಸ್ಥಲಾನಿ ಶುಚೀನಿ ಭವಂತ್ವಿತಿ ಭವಂತೋ ಬ್ರುವಂತು ।

ಸರ್ವಸ್ಥಳಗಳೂ ಶುಚಿಯಾಗಿವೆಯಲ್ಲವೇ ನೀವು ಹೇಳಿ ಎಂದು ನಿಮಂತ್ರಿತ ಬ್ರಾಹ್ಮಣರನ್ನು ಕೇಳಬೇಕು.

ಸರ್ವಾಣಿ ಸ್ಥಲಾನಿ ಶುಚೀನಿ ಭವಂತು ।

ಅದಕ್ಕೆ ಅವರು ಸರ್ವಸ್ಥಳವೂ ಶುಚಿಯಾಗಿದೆ ಎನ್ನಬೇಕು.

ಬ್ರಹ್ಮದಂಡಾರ್ಥಂ ಸತಿಲ ಹಿರಣ್ಯ ಕುಶ ಯವಾನ್ ಗೃಹೀತ್ವಾ ಬ್ರಾಹ್ಮಣಾನಾಂ ಪ್ರದಕ್ಷಿಣತ್ರಯ ನಮಸ್ಕಾರಾನ್ ಕುರ್ಯಾತ್ ।।

ಅನಂತರ ನಿಮಂತ್ರಿತ ಬ್ರಾಹ್ಮಣರಿಗೆ 3 ಬಾರಿ ಪ್ರದಕ್ಷಿಣೆ ಮಾಡಿ ನಮಸ್ಕರಿಸಲು ಬ್ರಹ್ಮದಂಡಕ್ಕಾಗಿ, ತಿಲ (ಎಳ್ಳು) ಹಿರಣ್ಯ (ನಾಣ್ಯಗಳು) ಕುಶ (3 ತುಂಡು ದರ್ಭೆ) ಯವ (ತೊಳೆದ ಅಕ್ಕಿ) ಇವುಗಳನ್ನು ಹಿಡಿದುಕೊಂಡು ಬ್ರಾಹ್ಮಣರನ್ನು 3 ಸಾರಿ ಪ್ರದಕ್ಷಿಣೆ ಮಾಡಬೇಕು. (ಕನಿಷ್ಠಪಕ್ಷ ವಿಶ್ವೇದೇವಸ್ಥಾನಕ್ಕೆ ಒಬ್ಬ ಬ್ರಾಹ್ಮಣ, ಪಿತೃಸ್ಥಾನಕ್ಕೆ ಒಬ್ಬ ಬ್ರಾಹ್ಮಣ ಅವಶ್ಯಕ. ವಿಷ್ಣುಸ್ಥಾನಕ್ಕೆ ಒಬ್ಬರನ್ನು ಪದ್ಧತಿ ಇರುವವರು ಬೇಕಾದರೆ ಹೇಳಬಹುದು. ಕರ್ತೃಗಳು ಹೆಚ್ಚುಮಂದಿ ಇದ್ದರೆ, ಅವರಲ್ಲಿ ಕಿರಿಯವನು ಮುಂದೆ ಇರಬೇಕು. ಅತ್ಯಂತ ಹಿರಿಯರಾದವರು ಕೊನೆಗೆ ಇರಬೇಕು. ಈ ರೀತಿಯಲ್ಲಿ ಬ್ರಾಹ್ಮಣರನ್ನು ಪ್ರದಕ್ಷಿಣೆ ಮಾಡಬೇಕು.)

ಓಂ ಓಂ ಸಮಸ್ತ ಸಂಪತ್ಸಮವಾಪ್ತಿ ಹೇತವಃ ।
ಸಮುತ್ಥಿತಾಽಪತ್ಕುಲ ಧೂಮಕೇತವಃ ।।
ಅಪಾರ ಸಂಸಾರ ಸಮುದ್ರ ಸೇತವಃ ।
ಪುನಂತು ಮಾಂ ಬ್ರಾಹ್ಮಣ ಪಾದ ಪಾಂಸವಃ ।।

ಆಪದ್ಘನಧ್ವಾಂತ ಸಹಸ್ರ ಭಾನವಃ ।
ಸಮೀಹಿತಾರ್ಥಾರ್ಪಣ ಕಾಮಧೇನವಃ ।।
ಸಮಸ್ತ ತೀರ್ಥಾಂಬು ಪವಿತ್ರಮೂರ್ತಯಃ ।
ರಕ್ಷಂತು ಮಾಂ ಬ್ರಾಹ್ಮಣ ಪಾದಪಾಂಸವಃ ।।

ನಮೋ ಬ್ರಹ್ಮಣ್ಯದೇವಾಯ ಗೋ ಬ್ರಾಹ್ಮಣ ಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ।।
ಪ್ರದಕ್ಷಿಣೆ ಕಾಲದಲ್ಲಿ ಈ ಶ್ಲೋಕವನ್ನು ಪಠಿಸಬೇಕು.

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಂಡು ಕೈಯಲ್ಲಿದ್ದ ಬ್ರಹ್ಮದಂಡವನ್ನು ಬ್ರಾಹ್ಮಣರಿಗೆ ತೋರಿಸುವುದು.

ಉಪವೀತಿ ।

ಈಗ ಜನಿವಾರವನ್ನು ಪುನಃ ಬಲಕ್ಕೆ ಹಾಕಿಕೊಂಡು ಬ್ರಹ್ಮದಂಡವನ್ನು ಬ್ರಾಹ್ಮಣರ ಮುಂದೆ ನೆಲದ ಮೇಲೆ ಇಡಬೇಕು.

ಏತೇಭ್ಯೋ ಬ್ರಾಹ್ಮಣೇಭ್ಯೋ ನಮಃ । ಇಮೇ ಕುಶಾಃ ಏಷ ಹಿ ಯಥಾಶಕ್ತಿ ಬ್ರಹ್ಮದಂಡಃ ॥

ಯಥಾಶಕ್ತಿ ಬ್ರಹ್ಮದಂಡವನ್ನು ಹಾಕಿದ್ದೇನೆ ಎನ್ನಬೇಕು.

ಅಸ್ತು ಬ್ರಹ್ಮದಂಡಃ ॥

ಅದಕ್ಕೆ ಬ್ರಾಹ್ಮಣರು ಬ್ರಹ್ಮದಂಡ ಸ್ವೀಕೃತವಾಯ್ತು ಎನ್ನಬೇಕು.

ಆಧಿವ್ಯಾಧಿಹರಂ ನೃಣಾಂ ಮೃತ್ಯುದಾರಿದ್ರ್ಯನಾಶನಂ ।
ಶ್ರೀ ಪುಷ್ಟಿ ಕೀರ್ತಿದಂ ವಂದೇ ವಿಪ್ರಶ್ರೀ ಪಾದಪಂಕಜಂ ॥
ವಿಪ್ರೌಘ ದರ್ಶನಾತ್ಸದ್ಯಃ ಕ್ಷೀಯಂತೇ ಪಾಪರಾಶಯಃ ।
ವಂದನಾನ್ಮಂಗಳಾವಾಪ್ತಿಃ ಅರ್ಚನಾದಚ್ಯುತಂ ಪದಂ ॥

ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣ ಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥

ನಮಸ್ಕೃತ್ಯ ॥

ಈ ಶ್ಲೋಕಗಳಿಂದ ಬ್ರಾಹ್ಮಣರಿಗೆ ಶ್ರಾದ್ಧ ಮಾಡುವವರೆಲ್ಲರೂ ಸಾಷ್ಟಾಂಗ ಪೂರ್ವಕವಾಗಿ ನಮಸ್ಕಾರ ಮಾಡಬೇಕು.

ಯಾವತೀರ್ವೈ ದೇವತಾಸ್ತಾಸ್ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ ತಸ್ಮಾದ್ಬ್ರಾಹ್ಮಣೇಭ್ಯೋ ವೇದವಿದ್ಭ್ಯೋ ದಿವೇದಿವೇ ನಮಸ್ಕುರ್ಯಾನ್ನಾಶ್ಲೀಲಂ ಕೀರ್ತಯೇದೇತಾ ಏವ ದೇವತಾಃ ಪ್ರೀಣಾತಿ ॥

ಸಮಸ್ತ ದೇವತಾಶ್ರಯಭೂತರನ್ನಾಗಿ ಭಾವಿಸಿರುವ ಈ ಬ್ರಾಹ್ಮಣರನ್ನು ಕೀರ್ತಿಸುವುದರಿಂದ, ನಮಸ್ಕರಿಸುವುದರಿಂದ ಸಮಸ್ತ ದೇವತೆಗಳೂ ಸುಪ್ರೀತರಾಗಲಿ ಎನ್ನಬೇಕು.

ಪ್ರೀಣಾತು ।

''ಹಾಗೆ ಸುಪ್ರೀತರಾಗಲಿ'' ಎಂದು ಬ್ರಾಹ್ಮಣರು ಹೇಳಬೇಕು.

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳಬೇಕು.

ಅಸ್ಮತ್ ಪಿತುಃ / ಅಸ್ಮನ್ಮಾತುಃ ಪ್ರತಿ ಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧಂ ಕರ್ತುಂ ಉದ್ಯುಕ್ತೋಽಸ್ಮಿ ।। (ಮುಖ್ಯ ಕಾಲೋ ಭೂತ್ವಾ) - ಮಮ ಅಧಿಕಾರ ಸಂಪದಸ್ತ್ವಿತಿ ಭವಂತೋ ಬ್ರುವಂತು ।

ಶ್ರಾದ್ಧಕರ್ಮಕ್ಕೆ ಅಧಿಕಾರ ಕೊಡಿರೆಂದು ಈ ಮಂತ್ರದಿಂದ ಬ್ರಾಹ್ಮಣರನ್ನು ಕೇಳಿಕೊಳ್ಳುವುದು.

ಅಧಿಕಾರ ಸಂಪದಸ್ತು ।

ಬ್ರಾಹ್ಮಣರು "ಅಧಿಕಾರ ಕೊಟ್ಟಿದ್ದೇವೆ" ಎನ್ನಬೇಕು.

ಕಾಲಶ್ಚ ಮುಖ್ಯಕಾಲೋಽಸ್ತ್ವಿತಿ ಭವಂತೋ ಬ್ರುವಂತು ।

"ತಾನು ಶ್ರಾದ್ಧಕರ್ಮ ಪ್ರಾರಂಭಿಸಿದ ಕಾಲ ಮುಖ್ಯ ಕಾಲವಾಗಲಿ" ಎಂದು ಬ್ರಾಹ್ಮಣರನ್ನು ಕೇಳಿಕೊಳ್ಳಬೇಕು.

ಕಾಲಶ್ಚ ಮುಖ್ಯಕಾಲೋಽಸ್ತು ।

ಆದಕ್ಕೆ ಬ್ರಾಹ್ಮಣರು ಮುಖ್ಯ ಕಾಲವಾಗಿದೆ ಎನ್ನಬೇಕು.

ಉಪವೀತಿ ।

ಜನಿವಾರ ಬಲಕ್ಕೆ ಹಾಕಿಕೊಳ್ಳಬೇಕು.

ಪ್ರಾಣಾನಾಯಮ್ಯ ।

ಓಂ ಭೂಃ । ಓಂ ಭುವಃ । ಓಗ್ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಗ್ಂ ಸತ್ಯಮ್ ।

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ।। ಓಂ ಆಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಸ್ಸುವರೋಮ್ ।।

ಈ ರೀತಿ ಪ್ರಾಣಾಯಾಮ ಮಾಡಬೇಕು.

ಶ್ರೀ ಗೋವಿಂದ ಗೋವಿಂದ ಗೋವಿಂದ ಶ್ರೀಮನ್ಮಹಾವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ಮೇರೋಃ ದಕ್ಷಿಣೇಪಾರ್ಶ್ವೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನ ಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ ಚಾಂದ್ರಮಾನೇನ

ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ .......... ನಾಮ ಸಂವತ್ಸರೇ ......... ಅಯನೇ......... ಋತೌ ............ಮಾಸೇ ....... ಪಕ್ಷೇ ......... ತಿಥೌ .......... ವಾಸರಯುಕ್ತಾಯಾಂ ವಿಷ್ಣುನಕ್ಷತ್ರ ವಿಷ್ಣುಯೋಗ ವಿಷ್ಣುಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಪುಣ್ಯತಿಥೌ,

ಈ ರೀತಿ ಸಂಕಲ್ಪವನ್ನು ಹೇಳಿ,

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳಬೇಕು.

ದಕ್ಷಿಣಾಭಿಮುಖೋ ಭೂತ್ವಾ ವಾಮಂ ಜಾನ್ವಾಚ್ಯ ।

ದಕ್ಷಿಣಕ್ಕೆ ತಿರುಗಿಕೊಂಡು ಎಡಗಾಲು ಮಂಡಿ ಊರಿಕೊಂಡು,

ಅಸ್ಮತ್ಪಿತುಃ / ಅಸ್ಮನ್ಮಾತುಃ ಪ್ರತಿಸಾಂವತ್ಸರೀಕ ಮೃತಾಹಾನ್ನಶ್ರಾದ್ಧೇ, ಅಸ್ಮತ್ ಪಿತೃ-ಪಿತಾಮಹ-ಪ್ರಪಿತಾಮಹಾನಾಂ ಗೋತ್ರಾಣಾಂ ....... ಶರ್ಮಣಾಂ, ವಸು, ರುದ್ರ, ಆದಿತ್ಯ ರೂಪಾಣಾಂ (ತಾಯಿ ಶ್ರಾದ್ಧವಾದರೆ ಅಸ್ಮನ್ ಮಾತೃ-ಪಿತಾಮಹಿ-ಪ್ರಪಿತಾಮಹೀನಾಂ ಗೋತ್ರಾಣಾಂ ...... ..... ...... ಮ್ನದಾನಾಂ, ವಸು, ರುದ್ರ, ಆದಿತ್ಯರೂಪಾಣಾಂ)

ಈ ಮಂತ್ರದಿಂದ :

ಪಿತೃ ಶ್ರಾದ್ಧದಲ್ಲಿ ಪಿತುಃ ...... ಪಿತಾಮಹಃ ...... ಪ್ರಪಿತಾಮಹಃ

(ತಂದೆ) (ತಂದೆಯ ತಂದೆ - ತಾತ) (ತಾತನ ತಂದೆ)

ಮಾತೃ ಶ್ರಾದ್ಧದಲ್ಲಿ ಮಾತೃ - ಪಿತಾಮಹಿ - ಪ್ರಪಿತಾಮಹಿ

(ತಾಯಿ) (ತಾಯಿಯ ಅತ್ತೆ) (ಪಿತಾಮಹಿಯ ಅತ್ತೆ)

ಅವರುಗಳನ್ನೂ - ಮತ್ತು ಅವರುಗಳಿಗೆ ರೂಪಗಳನ್ನೂ ಹೇಳಿ ಸಮಸ್ತ ಪಿತೃಗಳನ್ನೂ

ಉಪವೀತಿ ।

ಆಮೇಲೆ ಜನಿವಾರವನ್ನು ಬಲಕ್ಕೆ ಹಾಕಿಕೊಂಡು,

ಪುರೂರವಾರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಚ ।

ಪುರೂರವ ಆರ್ದ್ರವ ಮೊದಲಾದ ಸಮಸ್ತ ದೇವತೆಗಳನ್ನೂ ಎಂದು ಹೇಳಿ.

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಂಡು,

ಅಸ್ಮತ್ ಪಿತುಃ / ಅಸ್ಮನ್ಮಾತುಃ ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧಂ ಅನ್ನೇನ ಹವಿಷಾ ಪಾರ್ವಣ ವಿಧಾನೇನ ಯುಷ್ಮದನುಜ್ಞಯಾ ಸದ್ಯೈವಂ ಶ್ರಾದ್ಧಂ ಅನ್ನಾದಿದ್ರವ್ಯೇಣ ಅದ್ಯ ಕರಿಷ್ಯೇ ॥

ಈ ದಿನ, ನನ್ನ ತಂದೆಯ / ತಾಯಿಯ ಶ್ರಾದ್ಧಕರ್ಮದಲ್ಲಿ ಮೇಲ್ಕಂಡವರನ್ನು ತೃಪ್ತಿಪಡಿಸಲು ನಾನು ಅನ್ನಾದಿ ದ್ರವ್ಯಗಳಿಂದ, ಪಾರ್ವಣ ವಿಧಾನದಲ್ಲಿ ಮಾಡುತ್ತಿರುವ

ವಿಶ್ವೇದೇವಸಹಿತವಾದ ಈ ಶ್ರಾದ್ಧಕರ್ಮಕ್ಕೆ ನಿಮ್ಮ ಅಪ್ಪಣೆ ಕೋರುತ್ತೇನೆ ಎಂದು, ನಿಮಂತ್ರಿತ ಬ್ರಾಹ್ಮಣರನ್ನು ಕೇಳಬೇಕು.

ಕುರುಷ್ವ ।

ಬ್ರಾಹ್ಮಣರು 'ಹಾಗೆ ಮಾಡು' ಎನ್ನಬೇಕು.

ಉಪವೀತಿ ।

ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳಬೇಕು.

ವಿಶ್ವೇದೇವಸ್ಥಾನೇ ಹಸ್ತೋದಕಂ ದತ್ವಾ ।

ಪ್ರಥಮದಲ್ಲಿ ವಿಶ್ವೇದೇವರುಗಳನ್ನು ಆಹ್ವಾನಿಸಬೇಕು. ಇವರು ಪಿತೃಗಳನ್ನು ಕುರಿತು ತಪಸ್ಸು ಮಾಡಿ ತಮಗೆ ಪ್ರಥಮದಲ್ಲಿ ಆವಾಹನೆಯಾಗುವಂತೆ ವರವನ್ನು ಆ ಪಿತೃಗಳಿಂದ ಪಡೆದಿರುವರು.

ವಿಶ್ವೇದೇವಸ್ಥಾನಕ್ಕೆ ಕೂರುವ ಬ್ರಾಹ್ಮಣನಿಗೆ ಕೂರ್ಚದಿಂದ ಒಂದು ಸಲ ಹಸ್ತೋದಕ ಕೊಡಬೇಕು.

(ಕೂರ್ಚವನ್ನು ಕಲಶೋದಕದ ನೀರಿನಲ್ಲಿ ಅದ್ದಿ ಆ ಕೂರ್ಚದಿಂದ ಬ್ರಾಹ್ಮಣನ ಅಂಗೈಯನ್ನು ತಟ್ಟಬೇಕು.)

ಪುರೂರವ ಆರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಸ್ಥಾನೇ ಆಹವನೀಯಾರ್ಥೇ ಕ್ಷಣಂ ದತ್ವಾ ಭವದ್ಭಿಃ ಕ್ಷಣಃ ಪ್ರಸಾದಃ ಕರಣೀಯಃ ॥

ಈ ಮಂತ್ರವನ್ನು ಹೇಳಿ ವಿಶ್ವೇದೇವರುಗಳನ್ನು ಆ ಬ್ರಾಹ್ಮಣ ರೂಪದಲ್ಲಿ ಆಹ್ವಾನಿಸಿ, ಆ ಬ್ರಾಹ್ಮಣನನ್ನು ತೊಳೆದಕ್ಕಿಯಿಂದ ಪೂಜಿಸಿ, ಆತನ ಕೈಗೆ ಎರಡು ತುಂಡು ದರ್ಭೆಗಳನ್ನು ಕೊಡುವುದು. ಮತ್ತು ಆ ಬ್ರಾಹ್ಮಣನನ್ನು 'ಕ್ಷಣ'ವನ್ನು ಸ್ವೀಕರಿಸಲು ಕೇಳಿಕೊಳ್ಳುವುದು.

(ಕ್ಷಣ ಎಂದರೆ - ''ವಿಪ್ರರೇ, ಕ್ಷಣ ಕಾಲ ವಿಶ್ವೇದೇವ ಸ್ಥಾನದಲ್ಲಿ ದಯವಿಟ್ಟು ಇರಬೇಕು'' ಎಂದರ್ಥ. ಎರಡು ತುಂಡು ದರ್ಭೆಗಳನ್ನು ಅವರು ಸ್ವೀಕರಿಸಿದರೆ, ಅವರು ಆಹ್ವಾನವನ್ನು ಅಂಗೀಕರಿಸಿದಂತಾಯಿತು.)

ಸುಕರಣೀಯಃ ।

ಆ ಬ್ರಾಹ್ಮಣ 'ಕ್ಷಣ ಸ್ವೀಕರಿಸಿದೆ' ಎಂದು ತನ್ನ ಒಪ್ಪಿಗೆ ಕೊಡಬೇಕು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳಬೇಕು.

ಪಿತೃಸ್ಥಾನೇ / ಮಾತೃಸ್ಥಾನೇ ಹಸ್ತೋದಕಂ ದತ್ವಾ ॥

ಕಲಶದ ನೀರಿನಿಂದ ಕೂರ್ಚದಲ್ಲಿ, ಪಿತೃಸ್ಥಾನದಲ್ಲಿ ಕುಳಿತುಕೊಳ್ಳುವವರಿಗೆ ಒಂದು ಸಲ ಹಸ್ತೋದಕವನ್ನು ಕೊಡುವುದು. (ವಿಶ್ವೇದೇವರಿಗೆ ಕೊಟ್ಟ ಕ್ರಮದಲ್ಲಿ)

ಪಿತೃ, ಪಿತಾಮಹ, ಪ್ರಪಿತಾಮಹಾನಾಂ ಗೋತ್ರಾಣಾಂ ........... ಶರ್ಮಣಾಂ ವಸು, ರುದ್ರ, ಆದಿತ್ಯರೂಪಾಣಾಂ

(ತಾಯಿ ಶ್ರಾದ್ಧವಾದರೆ)

ಮಾತೃ, ಪಿತಾಮಹಿ, ಪ್ರಪಿತಾಮಹೀನಾಂ ಗೋತ್ರಾಣಾಂ... ...... ಮ್ಮದಾಯಿನಾಂ ವಸು, ರುದ್ರ, ಆದಿತ್ಯರೂಪಾಣಾಂ ಸ್ಥಾನೇ ಆಹವನೀಯಾರ್ಥೇ ಕ್ಷಣಂ ದತ್ವಾ ಭವದ್ಭಿಃ ಕ್ಷಣಃ -

ಪ್ರಸಾದಃ ಕರಣೀಯಃ ।

ಈ ಮಂತ್ರದಿಂದ ಪಿತೃಸ್ಥಾನಕ್ಕೆ ಕುಳಿತುಕೊಳ್ಳುವ ಬ್ರಾಹ್ಮಣನನ್ನು ಆಹ್ವಾನಿಸಿ ಎಳ್ಳುಕಾಳಿನಿಂದ ಆತನನ್ನು ಪೂಜಿಸಿ ಆತನ ಕೈಗೆ 3 ತುಂಡು ದರ್ಭೆಗಳನ್ನು ಕೊಡುವುದು. ಮತ್ತು ಆ ಬ್ರಾಹ್ಮಣನನ್ನು ''ಕ್ಷಣ'' ವನ್ನು ಸ್ವೀಕರಿಸಿ ಎಂದು ಕೇಳಿಕೊಳ್ಳುವುದು.

ಸುಕರಣೀಯಃ ।

ಪಿತೃಸ್ಥಾನದ ಬ್ರಾಹ್ಮಣನು ''ಸ್ವೀಕರಿಸಿದೆನು'' ಎನ್ನಬೇಕು.

ಉಪವೀತಿ ।

ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳಬೇಕು.

(ವಿಷ್ಣುಸ್ಥಾನಕ್ಕೆ ಬೇರೆ ಬ್ರಾಹ್ಮಣ ನಿಮಂತ್ರಣ ಕೆಲವು ಕಡೆ ಆಚರಣೆಯಲ್ಲಿದೆ. ಶ್ರಾದ್ಧಮಂತ್ರದಲ್ಲಿ 'ಪಿತೃರೂಪೀ ಶ್ರೀ ಜನಾರ್ದನ ವಾಸುದೇವಃ' ಎಂದೂ, ವಿಷ್ಣುಸಹಸ್ರನಾಮದಲ್ಲಿ 'ಸವಿತಾಪ್ರಪಿತಾಮಹಃ' ಎಂದೂ ಪಿತೃವೇ ವಿಷ್ಣುವೆಂಬ ಭಾವನೆ ಇರುವುದರಿಂದಲೂ, ದೇವರ ಎಲೆ ಎಂದು ಬೇರೆ ಎಲೆಯನ್ನು ಹಾಕಿ, ಅದರ ಮುಂದೆ ಸಾಲಿಗ್ರಾಮವುಳ್ಳ ಸಂಪುಟವನ್ನು ಇಡುವ ಪದ್ಧತಿ ಇರುವುದರಿಂದಲೂ, ವಿಷ್ಣುಸ್ಥಾನಕ್ಕೆ ಬೇರೆಯಾಗಿ ನಿಮಂತ್ರಿಸುವುದು ಸ್ಮಾರ್ತರಲ್ಲಿ ಹೆಚ್ಚು ಆಚರಣೆಯಲ್ಲಿಲ್ಲವಾಗಿ ವಿಷ್ಣುಸ್ಥಾನಕ್ಕೆ ಬೇರೆ ಬ್ರಾಹ್ಮಣ ನಿಮಂತ್ರಣವನ್ನು ಇಲ್ಲಿ ಹೇಳಿಲ್ಲ.) ಬೇರೆ ಹೇಳಿ ಮಾಡುವುದು ಸಂಭವನೀಯವಲ್ಲದೆ ಇಲ್ಲ.

ದೇವಾನಾಂ ಚ ।

''ಕ್ಷಣ''ವನ್ನು ಕೊಟ್ಟಮೇಲೆ ಈ ಮಂತ್ರದಿಂದ ವಿಶ್ವೇದೇವರುಗಳನ್ನೂ.

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಂಡು

ಮಮ ಪಿತೄಣಾಂ ಚ (ಮಾತೄಣಾಂ ಚ) ।

ಎಲ್ಲಾ ಪಿತೃಗಳನ್ನೂ ಆ ಬ್ರಾಹ್ಮಣರಲ್ಲಿ ಉದ್ದೇಶಿಸಿ

ಸರ್ವೇಷಾಂ ಸ್ವಾಗತಮ್ ।

ಜನಿವಾರವನ್ನು ಬಲಕ್ಕೆ ಹಾಕಿಕೊಂಡು, ಸ್ವಾಗತಿಸಿ, ಕೈ ಮುಗಿಯುವುದು.

ಸುಸ್ವಾಗತಮ್ ।

ಅದಕ್ಕೆ ಇಬ್ಬರೂ ಬ್ರಾಹ್ಮಣರೂ, ಒಳ್ಳೆ ಸ್ವಾಗತ ದೊರಕಿತು ಎನ್ನಬೇಕು.

ಅಕ್ರೋಧನೈಃ ಶೌಚಪರೈಃ ಸತತಂ ಬ್ರಹ್ಮವಾದಿಭಿಃ । ಭವಿತವ್ಯಂ ಭವದ್ಭಿಶ್ಚ ಮಯಾ ಚ ಶ್ರಾದ್ಧಕರ್ಮಣಿ ।

ಆ ಬ್ರಾಹ್ಮಣರನ್ನು ಕುರಿತು ನೀವು ಕ್ರೋಧರಹಿತರು ; ಶೌಚಪರರು, ಯಾವಾಗಲೂ ಬ್ರಹ್ಮವಿಚಾರದಲ್ಲಿಯೇ ಮಗ್ನರಾಗಿರುವವರು, ಎಂದು ಹೊಗಳಿ "ನಾನು ಮಾಡುವ ಶ್ರಾದ್ಧಕರ್ಮ ಕಾಲದಲ್ಲಿ ನೀವು ಶಾಂತಮೂರ್ತಿಗಳಾಗಿ ನನ್ನ ಉಪಚಾರವನ್ನು ಸ್ವೀಕರಿಸಿ" ಎನ್ನಬೇಕು.

ತಥಾ ಹಿ ।

ಹಾಗೇ ಆಗಲಿ ಎಂದು ಬ್ರಾಹ್ಮಣರು ಹೇಳಬೇಕು.

ಪಾದ್ಯಾರ್ಥಂ ಕಲಶೋದಕಂ ಯವ, ತಿಲ, ಗಂಧ, ದರ್ಭಾನ್ ಆದಾಯ । ಗೃಹಾಂಗಣದೇಶೇ ಗೋಮಯ ಸಹಿತೇನ ಉತ್ತರತಃ ಸವ್ಯೇ ದೇವಾರ್ಥಂ ಚತುರಶ್ರ ಮಂಡಲಂ ಕೃತ್ವಾ - ಷಡಂಗುಲಂ ವಿಹಾಯ ತದ್ದಕ್ಷಿಣದೇಶೇ ಪ್ರಾಚೀನಾವೀತಿನಾ ಪಿತ್ರ್ಯರ್ಥ್ಯ ವರ್ತುಲಾಕಾರ ಮಂಡಲಂ ಕೃತ್ವಾ ।

ಒಂದು ದೊನ್ನೆಯಲ್ಲಿ ಸ್ವಲ್ಪ ಕಲಶೋದಕ, ತುಂಡು ದರ್ಭೆಗಳು, ಗೋಮಯ, ಒಂದು ಸಣ್ಣ ಅಗ್ರದ ಬಾಳಿಲೆಯ ಮೇಲೆ ಒಂದು ಪಾರ್ಶ್ವದಲ್ಲಿ ಸ್ವಲ್ಪ ತುಪ್ಪ, ಸ್ವಲ್ಪ ತೇದ ಗಂಧ, ಸ್ವಲ್ಪ ತೊಳೆದ ಅಕ್ಕಿಯನ್ನು ಇಟ್ಟುಕೊಂಡು ಇನ್ನೊಂದು ಬದಿಯಲ್ಲಿ ಸ್ವಲ್ಪ ತುಪ್ಪ, ಸ್ವಲ್ಪ ತೇದ ಗಂಧ, ಸ್ವಲ್ಪ ಕರಿ ಎಳ್ಳು ಇವುಗಳನ್ನು ಇಟ್ಟುಕೊಂಡು ಜೊತೆಯಲ್ಲಿ ದೊಡ್ಡ ಉದ್ಧರಣೆ, ಒಂದು ದೊಡ್ಡ ಪಾತ್ರೆಯಲ್ಲಿ ಪಾದಪ್ರಕ್ಷಾಳನೆಗೆ ನೀರು, ದೊಡ್ಡ ಪಾತ್ರೆಯಿಂದ ಬಗ್ಗಿಸಿಕೊಳ್ಳಲು ಒಂದು ಚಂಬು ಅಥವಾ ಸಣ್ಣ ಪಾತ್ರೆ ಇವುಗಳನ್ನು ತೆಗೆದುಕೊಂಡು ಅಂಗಳಕ್ಕೆ ಬರುವುದು.

ಮೊದಲು ಅಂಗಳದಲ್ಲಿ 2 ಮಂಡಲಗಳನ್ನು ಮಾಡಬೇಕು.

ಮಣೆಯನ್ನು ಹಾಕಿಕೊಂಡು ಮಣೆಯಮೇಲೆ ಪೂರ್ವಾಭಿಮುಖವಾಗಿ (ಜನಿವಾರ ಬಲದಲ್ಲಿದ್ದೇ ಇರುತ್ತೆ) ಕುಳಿತುಕೊಂಡು ತನಗೆ ಅಭಿಮುಖವಾಗಿ ಉತ್ತರದ ಕಡೆ ವಿಶ್ವೇದೇವರಿಗೆ ಒಂದು ಚೌಕನೆಯ ಮಂಡಲವನ್ನು ಗೋಮಯ ಮತ್ತು ದೊನ್ನೆಯಲ್ಲಿ ತಂದಿರುವ ಕಲಶೋದಕದಿಂದ ಮಾಡಬೇಕು.

ಆ ಮಂಡಲಕ್ಕೆ 6 ಅಂಗುಲ ದೂರದಲ್ಲಿ ದಕ್ಷಿಣದ ಕಡೆಗೆ ಜನಿವಾರವನ್ನು ಎಡಕ್ಕೆ ಹಾಕಿಕೊಂಡು, ಪಿತೃಗಳಿಗೆ ವರ್ತುಳಾಕಾರ ಮಂಡಲವನ್ನು ಗೋಮಯ, ಕಲಶೋದಕಗಳಿಂದ ಮಾಡಬೇಕು.

ಉಪವೀತಿ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ವಿಶ್ವೇಷಾಂ ದೇವಾನಾಂ ಪಾದ್ಯಮಂಡಲಸ್ಥಾನೇ ಇದಮಿದಮಾಸನಂ ।

ಈ ರೀತಿ ಹೇಳಿಕೊಂಡು ಅಕ್ಕಿಕಾಳಿನಿಂದ ವಿಶ್ವೇದೇವರ ಸ್ಥಾನದ ಚೌಕದ ಮಂಡಲವನ್ನು ಪೂಜಿಸುವುದು.

ಪಾದ್ಯ ಸ್ಥಾನೇ ಇಮಾ ಆಪಃ ।

ಕಲಶೋದಕದ ನೀರನ್ನು ಎರಡು ಸಾರಿ ಉದ್ಧರಣೆಯಿಂದ ಮಂಡಲದ ಮೇಲೆ ಪಾದ್ಯಾರ್ಥವಾಗಿ ಬಿಡುವುದು.

ಅರ್ಚತ ಪ್ರಾರ್ಚತ ಇಮೇ ಗಂಧಾಃ ।

ಸ್ವಲ್ಪ ಗಂಧವನ್ನು ಈ ಮಂಡಲದ ಮೇಲೆ ಇಡುವುದು.

ಇಮೇ ಯವಾಃ ।

ಸ್ವಲ್ಪ ಅಕ್ಕಿಕಾಳನ್ನು ಮಂಡಲದ ಮೇಲೆ ಇಡುವುದು.

ಇಮೌ ಕುಶೌ ।

ಮಂಡಲದ ಮೇಲೆ 2 ತುಂಡು ದರ್ಭೆಗಳನ್ನು ಪಶ್ಚಿಮದಿಂದ ಪೂರ್ವಕ್ಕೆ ಇಡುವುದು.

ಯವ ಸಹಿತ ಉದಕೇನ್ನೈವ ಅಷ್ಟಾರ್ಘ್ಯಃ ಸಂಪೂರ್ಣಾರ್ಚನಮ್ ।

ಆಮೇಲೆ ದೊನ್ನೆ ನೀರನ್ನು ಉದ್ಧರಣೆಯಿಂದ ತೆಗೆದುಕೊಂಡು ಎರಡು ಸಾರಿ ಮಂಡಲದ ಮೇಲೆ ಅಕ್ಕಿಕಾಳು ಸಹಿತ ಅರ್ಘ್ಯ ಬಿಡುವುದು. ಅರ್ಚನೆ ಸಂಪೂರ್ಣವಾಯ್ತು ಅಲ್ಲವೆ ಎನ್ನಬೇಕು.

ಅಸ್ತು ।

ಆದಕ್ಕೆ ವಿಶ್ವೇದೇವ ಸ್ಥಾನದ ಬ್ರಾಹ್ಮಣನು "ಸಂಪೂರ್ಣಾರ್ಚನಂ ಅಸ್ತು" ಎನ್ನಬೇಕು.

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳಬೇಕು.

ಅಸ್ಮತ್ ಪಿತೃ, ಪಿತಾಮಹ, ಪ್ರಪಿತಾಮಹಾನಾಂ /

ತಾಯಿ ಶ್ರಾದ್ಧವಾದಲ್ಲಿ

ಅಸ್ಮನ್ಮಾತೃ, ಪಿತಾಮಹಿ, ಪ್ರಪಿತಾಮಹೀನಾಂ

ಪಾದ್ಯಮಂಡಲಸ್ಥಾನೇ ಇದಮಿದಮಾಸನಂ । ಪಾದ್ಯ ಸ್ಥಾನೇ ಇಮಾ ಆಪಃ । ಅರ್ಚತ ಪ್ರಾರ್ಚತ ಇಮೇ ಗಂಧಾಃ । ಇಮೇ ತಿಲಾಃ । ಇಮೇ ಕುಶಾಃ ।

ಎಳ್ಳಿನಿಂದ ಪಿತೃಸ್ಥಾನದ ವರ್ತುಳಾಕಾರ ಮಂಡಲವನ್ನು ಪೂಜಿಸುವುದು. ಕಲಶೋದಕದ ನೀರನ್ನು ಎರಡು ಸಾರಿ ಉದ್ಧರಣೆಯಿಂದ ವರ್ತುಳಾಕಾರ ಮಂಡಲದ ಮೇಲೆ ಪಾದ್ಯಾರ್ಥವಾಗಿ ಬಿಡುವುದು. ಸ್ವಲ್ಪ ಎಳ್ಳನ್ನು ಈ ಮಂಡಲದ ಮೇಲೆ ಇಡುವುದು. ಮೂರು ತುಂಡು ದರ್ಭೆಗಳನ್ನು ಮಂಡಲದ ಮೇಲೆ, ಉತ್ತರದಿಂದ ದಕ್ಷಿಣಕ್ಕೆ ಇಡುವುದು.

ತಿಲಸಹಿತ ಉದಕೇನ್ನೈವ ಅಷ್ಟಾರ್ಘ್ಯೈಃ ಸಂಪೂರ್ಣಾರ್ಚನಮ್ ।

ಅನಂತರ ದೊನ್ನೆಯ ನೀರನ್ನು ಉದ್ಧರಣೆಯಿಂದ ತೆಗೆದುಕೊಂಡು ಮೂರು ಸಾರಿ ಮಂಡಲದ ಮೇಲೆ ಎಳ್ಳು ಸಹಿತ ಅರ್ಘ್ಯ ಬಿಡುವುದು. ಅರ್ಚನೆ ಸಂಪೂರ್ಣವಾಯ್ತು ಅಲ್ಲವೆ ಎನ್ನಬೇಕು.

ಅಸ್ತು ।

ಪಿತೃಸ್ಥಾನದ ಬ್ರಾಹ್ಮಣನು ''ಸಂಪೂರ್ಣವಾಯ್ತು'' ಎನ್ನಬೇಕು.

ಉಪವೀತಿ ।

ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳುವುದು.

ಪುರೂರವಾರ್ದ್ರವ ಸಂಜ್ಞಕಾ ವಿಶ್ವೇದೇವಾಃ ಸ್ವಾಗತಮ್ ।

ವಿಶ್ವೇದೇವರ ಸ್ಥಾನಕ್ಕೆ ನಿಮಂತ್ರಿತನಾದ ಬ್ರಾಹ್ಮಣನನ್ನು ಚತುರಶ್ರ ಮಂಡಲದ ಬಳಿಗೆ ಬರುವಂತೆ ಪ್ರಾರ್ಥಿಸಿಕೊಳ್ಳುವುದು. ಈ ಮಂತ್ರದಿಂದ ಎರಡು ತುಂಡು ದರ್ಭೆಗಳನ್ನು ಬ್ರಾಹ್ಮಣನ ಪಾದಗಳ ಮುಂದೆ ದಕ್ಷಿಣದಿಂದ ಉತ್ತರಕ್ಕೆ ಎಳೆದು ಉತ್ತರಕ್ಕೆ ಹಾಕುವುದು.
(ಇದೇ ಸ್ವಾಗತಕ್ಕೆ ಚಿಹ್ನೆ).

ಸುಸ್ವಾಗತಮ್ ।

ಆ ಬ್ರಾಹ್ಮಣನು 'ಒಳ್ಳೆಯ ಸ್ವಾಗತ ಲಭಿಸಿತು' ಎನ್ನಬೇಕು.

ಪುರೂರವಾರ್ದ್ರವ ಸಂಜ್ಞಕಾಃ ವಿಶ್ವೇದೇವಾಃ ಇದಂ ವಃ ಪಾದ್ಯಂ ಇದಂ ವಃ ಪಾದ್ಯಮ್ ॥

ದೊನ್ನೆ ನೀರಿನಿಂದ ಆ ಬ್ರಾಹ್ಮಣನ ಪಾದಗಳ ಬಳಿ ಎರಡು ಸಾರಿ ಪಾದ್ಯವನ್ನು ಕೊಡುವುದು. (ಕಲಶದ ನೀರನ್ನು ಉದ್ಧರಣೆಯಿಂದ ತೆಗೆದುಕೊಂಡು ಎರಡು ಸಾರಿ ನೆಲಕ್ಕೆ ಬಿಡುವುದು).

ಸುಪಾದ್ಯಮ್ ।

'ಸರಿಯಾಗಿ ಪಾದ್ಯ ಲಭಿಸಿತು' ಎಂದು ಬ್ರಾಹ್ಮಣನು ಹೇಳಬೇಕು.

ಪವಿತ್ರಂ ವಿನಾ ಸವ್ಯೇನ ಪಾದೌ ಪ್ರಕ್ಷಾಳ್ಯ ।

ಕೈಗೆ ಹಾಕಿಕೊಂಡಿರುವ ಪವಿತ್ರವನ್ನು ತೆಗೆದು ಬಲಗಿವಿಗೆ ಸಿಕ್ಕಿಸಿಕೊಳ್ಳಬೇಕು.

ಜನಿವಾರವನ್ನು ಬಲದಲ್ಲೇ ಇಟ್ಟುಕೊಂಡು ಆ ಬ್ರಾಹ್ಮಣನ ಎರಡು ಪಾದಗಳನ್ನೂ ತೊಳೆಯಬೇಕು. ಇದಕ್ಕಾಗಿ ತಂದಿರುವ ದೊಡ್ಡ ಪಾತ್ರೆಯ ನೀರನ್ನು ಸಣ್ಣ ಪಾತ್ರೆಗೆ ಬಗ್ಗಿಸಿಕೊಂಡು ಮೊದಲು ಬಲಗಾಲು, ಆಮೇಲೆ ಎಡಗಾಲುಗಳನ್ನು ತೊಳೆಯಬೇಕು.

(ನೀರು ಪಾದದ ಗಿಣ್ಣಿನ ಮೇಲಕ್ಕೆ ಬರಬಾರದು - ಮೇಲ್ಭಾಗ 'ಜಾನು' ಎನಿಸಿಕೊಳ್ಳುವುದು). (ಬ್ರಾಹ್ಮಣರನ್ನು ನಿಲ್ಲಿಸಿಯೇ ಪಾದಪ್ರಕ್ಷಾಳನೆ ಮಾಡುವುದು ಕೆಲವು ಕಡೆ ರೂಢಿಯಲ್ಲಿದೆ).

ಶನ್ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥

ನಮೋ ಬ್ರಹ್ಮಣ್ಯ ದೇವಾಯ ಗೋಬ್ರಾಹ್ಮಣ ಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥
ಈ ಮಂತ್ರ ಹೇಳಿಕೊಂಡು ಕಾಲು ತೊಳೆಯಬೇಕು.

ಪವಿತ್ರಂ ಧೃತ್ವಾ ।

ಬಲಗಿವಿಗೆ ಸಿಕ್ಕಿಸಿಕೊಂಡಿದ್ದ ಪವಿತ್ರವನ್ನು ತೆಗೆದು ಪುನಃ ಬಲ ಅನಾಮಿಕಾ ಬೆರಳಿಗೆ ಉಂಗುರದಂತೆ ಧರಿಸಿಕೊಳ್ಳುವುದು.

ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ ವಸ್ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯ ರಶ್ಮಿಭಿಃ ॥

ಪುನಃ ಪಾದ್ಯಮ್ ।

ಪಾದಾಂಗುಷ್ಟಕ್ಕೆ ಆಜ್ಯವನ್ನು ಸವರುವುದು. ಪುನಃ ದೊನ್ನೆಯ ನೀರಿನಿಂದ ಪಾದ್ಯವನ್ನು ಎರಡು ಸಾರಿ ಬಿಡುವುದು.

ಸುಪಾದ್ಯಮ್ ।

ಆ ಬ್ರಾಹ್ಮಣನು ಒಳ್ಳೆಯ ಪಾದ್ಯ ಲಭಿಸಿತು ಎನ್ನಬೇಕು.

ಅಸ್ಮತ್ ಪಿತೃ-ಪಿತಾಮಹ-ಪ್ರಪಿತಾಮಹಾಃ ............ ಗೋತ್ರಾಃ ............. ಶರ್ಮಾಣಃ ವಸು, ರುದ್ರ, ಆದಿತ್ಯ ರೂಪಾಃ (ತಾಯಿಯ ಶ್ರಾದ್ಧವಾದರೆ ಅಸ್ಮನ್ ಮಾತೃ-ಪಿತಾಮಹಿ-ಪ್ರಪಿತಾಮಹ್ಯಃ ........ ಗೋತ್ರಾಃ ....... ಮ್ನ್ಮದಾಃ, ವಸು, ರುದ್ರ, ಆದಿತ್ಯ ರೂಪಾಃ) ಸವ್ಯೇನ ಸ್ವಾಗತಮ್ ॥

ಜನಿವಾರವನ್ನು ಬಲಕ್ಕೆ ಹಾಕಿಕೊಂಡೇ ಈ ಮಂತ್ರವನ್ನು ಹೇಳಿಕೊಂಡು ಪಿತೃಸ್ಥಾನಕ್ಕೆ ನಿಮಂತ್ರಿಸಿದ ಬ್ರಾಹ್ಮಣನಿಗೆ ಸ್ವಾಗತ ನೀಡಬೇಕು ಮತ್ತು ವರ್ತುಳಾಕಾರ ಮಂಡಲದ ಬಳಿ ಮಣೆಯಮೇಲೆ ಕುಳಿತುಕೊಳ್ಳುವಂತೆ ಪ್ರಾರ್ಥಿಸಬೇಕು.

3 ತುಂಡು ದರ್ಭೆಗಳನ್ನು ಉತ್ತರದಿಂದ ದಕ್ಷಿಣಕ್ಕೆ ಈ ಬ್ರಾಹ್ಮಣನ ಪಾದಗಳ ಮುಂದೆ ಎಳೆದು ದಕ್ಷಿಣಕ್ಕೆ ಹಾಕಬೇಕು. (ಸ್ವಾಗತ ಲಾಂಛನವಾಗಿ).

ಸುಸ್ವಾಗತಮ್ ।

ಆ ಬ್ರಾಹ್ಮಣನು 'ಒಳ್ಳೆಯ ಸ್ವಾಗತ' ಎನ್ನಬೇಕು.
(ಸ್ವಾಗತಗಳೆಲ್ಲಾ ಸವ್ಯದಲ್ಲೇ ಆಗಬೇಕು).

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳಬೇಕು.

ಸ್ವಾಗತಾನಂತರಂ ಇದಂ ವಃ ಪಾದ್ಯಮ್ । ಏವಂ ತ್ರಿಃ ॥

ಆಮೇಲೆ ದೊನ್ನೆ ನೀರಿನಿಂದ ಪಾದಗಳ ಬಳಿ ಬ್ರಾಹ್ಮಣನಿಗೆ 3 ಸಾರಿ ಪಾದ್ಯ ಕೊಡಬೇಕು.

ಪವಿತ್ರಂ ವಿನಾ - ಸವ್ಯೇನ ಪಾದೌ ಪ್ರಕ್ಷಾಳ್ಯ । ಶನ್ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥

ನಮೋ ಬ್ರಹ್ಮಣ್ಯ ದೇವಾಯ ಗೋ ಬ್ರಾಹ್ಮಣ ಹಿತಾಯ ಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥

ಪವಿತ್ರವನ್ನು ತೆಗೆದು ಮೊದಲಿನಂತೆ ಕಿವಿಗೆ ಸಿಕ್ಕಿಸಿಕೊಂಡು ಜನಿವಾರವನ್ನು ಬಲಕ್ಕೆ ಹಾಕಿಕೊಂಡು ಈ ಮಂತ್ರಗಳಿಂದ ಪಿತೃಸ್ಥಾನದ ಬ್ರಾಹ್ಮಣನ ಎರಡು ಪಾದಗಳನ್ನೂ ತೊಳೆಯುವುದು.

(ವಿಶ್ವೇದೇವ ಸ್ಥಾನದ ಬ್ರಾಹ್ಮಣನಿಗೆ ಪಾದಪ್ರಕ್ಷಾಳನೆ ಮಾಡಿದಂತೆ ಮಾಡುವುದು.)

ಪವಿತ್ರಂ ಧೃತ್ವಾ - ಪ್ರಾಚೀನಾವೀತಿ ।

ಕಿವಿಗೆ ಸಿಕ್ಕಿಸಿಕೊಂಡಿದ್ದ ಪವಿತ್ರವನ್ನು ಪುನಃ ಬಲ ಅನಾಮಿಕಾ ಬೆರಳಿಗೆ ಧರಿಸಿ ಜನಿವಾರವನ್ನು ಎಡಕ್ಕೆ ಹಾಕಿಕೊಂಡು.

ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ ವಸ್ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯ ರಶ್ಮಿಭಿಃ ॥

ಈ ಮಂತ್ರದಿಂದ ಬ್ರಾಹ್ಮಣನ ಅಂಗುಷ್ಠಗಳಿಗೆ ತುಪ್ಪವನ್ನು ಸವರುವುದು.

ಪುನಃ ಪಾದ್ಯಮ್ ।

ಪುನಃ ಉಳಿದ ದೊನ್ನೆಯ ನೀರೆಲ್ಲವನ್ನೂ ಬ್ರಾಹ್ಮಣನ ಅಂಗುಷ್ಠಗಳ ಮೇಲೆ 3 ಸಾರಿ ಪಾದ್ಯ ಬಿಡುವುದು.

ಸುಪಾದ್ಯಮ್ ।

ಬ್ರಾಹ್ಮಣನು 'ಒಳ್ಳೆಯ ಪಾದ್ಯ ಲಭಿಸಿತು' ಎನ್ನಬೇಕು.

ಸವ್ಯಮ್ ।

ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳುವುದು.

ಯದೀಚ್ಛಸಿ ಮಹಾರಾಜ ಸರ್ವ ತೀರ್ಥಾವಗಾಹನಮ್ ।
ವಿಪ್ರಪಾದ ವಿನಿರ್ಮುಕ್ತಂ ತೋಯಂ ಶಿರಸಿ ಧಾರಯ ॥

ಈ ಶ್ಲೋಕದಿಂದ ಬ್ರಾಹ್ಮಣರ ಪಾದಪ್ರಕ್ಷಾಲಿತ ಉದಕವನ್ನು ಶ್ರಾದ್ಧಕರ್ತೃಗಳು ತಲೆಯಮೇಲೆ ಪ್ರೋಕ್ಷಿಸಿಕೊಳ್ಳುವುದು.

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳುವುದು.

ಗಂಧಪಾತ್ರಂ, ಮಂಡಲೇ ದಕ್ಷಿಣಾಗ್ರಂ ನಿಧಾಯ ।

ಪಾದಪ್ರಕ್ಷಾಳನೆಗೆ ತಂದಿದ್ದ ಸಣ್ಣ ಅಗ್ರದ ಬಾಳೆಲೆಯನ್ನು ಪಾದಪ್ರಕ್ಷಾಳನೆ ಮಾಡಿದ ಸ್ಥಳದಲ್ಲಿ ತಲೆಕೆಳಗಾಗಿ ದಕ್ಷಿಣಾಗ್ರವಾಗಿ ಹಾಕಿ, ಅದರ ಮೇಲೆ ಅದು ಹಾರಿಹೋಗದಂತೆ ಸ್ವಲ್ಪ ಗೋಮಯವನ್ನಿಡುವುದು.

ಸವ್ಯಮ್ ।

ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳುವುದು.

ಪವಿತ್ರಂ ವಿಸೃಜ್ಯ । ಕರ್ತಾ ಸ್ವಯಂ ಪಾದೌ ಪ್ರಕ್ಷಾಳ್ಯ । ಈಶಾನ್ಯಮುಖ ಉಪವಿಶ್ಯ । ಆಚಮ್ಯ । ವಿಶ್ವೇದೇವಾಃ ಪ್ರಾಙ್ಮುಖಾಃ । ಪಿತರಃ ಉದಙ್ಮುಖಾಶ್ಚ । ದ್ವಿರಾಚಾಮೇತ್ ॥

ಬೆರಳಿಗೆ ಹಾಕಿಕೊಂಡಿರುವ ಪವಿತ್ರವನ್ನು (ಮುಖ್ಯ ಕರ್ತೃ ಮಾತ್ರ) ತೆಗೆದು ಅದರ ಗಂಟನ್ನು ಬಿಚ್ಚಿ ತಲೆಕೆಳಗಾಗಿ ಹಾಕಿರುವ ಬಾಳೆಯೆಲೆ ಬಳಿ ಹಾಕಿ, ಕರ್ತೃವು ಕೈ ಕಾಲು ತೊಳೆದುಕೊಂಡು, ಮಂಡಲಗಳಿಗೆ ಈಶಾನ್ಯದಲ್ಲಿ ಪೂರ್ವಾಭಿಮುಖವಾಗಿ ಕುಳಿತು ಎರಡು ಬಾರಿ ಆಚಮನ ಮಾಡಬೇಕು.

ಕರ್ತೃವು ಆಚಮನ ಮಾಡಿದಮೇಲೆ, ಬ್ರಾಹ್ಮಣರು ಆಚಮನ ಮಾಡಬೇಕು.

(ಮಂಡಲಾತ್ ಪೂರ್ವತೋ ದೇವಾಃ ಪಿತರಸ್ತೂತ್ತರೇತಥಾ ।

ಕರ್ತಾ ಈಶಾನ್ಯ ದೇಶೇತು ಶ್ರಾದ್ಧೇಷ್ವಾಚಮನಕ್ರಮಃ ॥

ಎಂಬಂತೆ ಮಂಡಲಕ್ಕೆ ಪೂರ್ವದಲ್ಲಿ ವಿಶ್ವೇದೇವಸ್ಥಾನದ ಬ್ರಾಹ್ಮಣನು ಉತ್ತರಾಭಿಮುಖವಾಗಿಯೂ ಕುಳಿತು ಎರಡು ಬಾರಿ ಆಚಮನ ಮಾಡಬೇಕು.)

ಕರ್ತಾ ಅನ್ಯಂ ಪವಿತ್ರಂ ಧೃತ್ವಾ ।

ಬೇರೆ ಪವಿತ್ರವನ್ನು ಅನಾಮಿಕಾ ಬೆರಳಿಗೆ ಹಾಕಿಕೊಳ್ಳಬೇಕು.

ಪುರೂರವಾರ್ದ್ರವ ಸಂಜ್ಞಕಾ ವಿಶ್ವೇದೇವಾಃ ಭೂರ್ಭುವಸ್ಸುವಸ್ವಾಹಾಸ್ತಾಂ ।

ವಿಶ್ವೇದೇವ ಸ್ಥಾನದ ಬ್ರಾಹ್ಮಣನು ಕುಳಿತಿರುವ ಮಣೆಯ ಕೆಳಗೆ ಬಲತೊಡೆ ಕೆಳಗೆ ಎರಡು ತುಂಡು ದರ್ಭೆಗಳನ್ನು ಇಡುವುದು.

ಅಯಂ ವೋ ವಿಷ್ಟರಃ ಅತ್ರ ಉಪವಿಶಂತು ಭವಂತಃ ।

ಹೀಗೆ ಇಟ್ಟು ವಿಷ್ಟರಾಸನ (ದರ್ಭಾಸನ)ದ ಮೇಲೆ ಕುಳಿತುಕೊಳ್ಳಿ ಎಂದು ಬ್ರಾಹ್ಮಣನಿಗೆ ಹೇಳಬೇಕು.

ಉಪವಿಶಾಮಃ ।

ವಿಶ್ವೇದೇವ ಸ್ಥಾನದ ಬ್ರಾಹ್ಮಣನು 'ಕುಳಿತುಕೊಂಡೆ' ಎನ್ನಬೇಕು.

(ವಿಶ್ವೇದೇವಸ್ಥಾನದ ಬ್ರಾಹ್ಮಣನಿಗೆ ಪೂರ್ವಾಭಿಮುಖವಾಗಿಯೂ, ಪಿತೃಸ್ಥಾನದ ಬ್ರಾಹ್ಮಣನಿಗೆ ಉತ್ತರಾಭಿಮುಖವಾಗಿಯೂ ಸುಮಂಗಲಿ ಮತ್ತು ದೇವರಿಗೆ ಪೂರ್ವಾಭಿ ಮುಖ ಅಥವಾ ಉತ್ತರಾಭಿಮುಖವಾಗಿ ಭೋಜನಕ್ಕೆ ಎಲೆಗಳನ್ನು ಹಾಕಬೇಕು).

ಪ್ರಾಚೀನಾವೀತಿ ।

ಆಮೇಲೆ ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳಬೇಕು.

ಅಸ್ಮತ್ ಪಿತೃ, ಪಿತಾಮಹ, ಪ್ರಪಿತಾಮಹಾಃ / (ಅಸ್ಮನ್ಮಾತೃ, ಪಿತಾಮಹಿ, ಪ್ರಪಿತಾಮಹ್ಯಃ) ಭೂರ್ಭುವಸ್ಸುವಸ್ಸ್ವಧಾಸ್ತಾಂ ಅಯಂ ವೋ ವಿಷ್ಟರಃ, ಅತ್ರ ಉಪವಿಶಂತು ಭವಂತಃ ।

ಪಿತೃಸ್ಥಾನದ ಬ್ರಾಹ್ಮಣನ ಮಣೆ ಕೆಳಗೆ ಆತನ ಎಡತೊಡೆ ಕೆಳಗೆ 3 ತುಂಡು ದರ್ಭೆಗಳನ್ನಿಡುವುದು. ದರ್ಭಾಸನವನ್ನು ಅರ್ಪಿಸಿರುವೆ ಕುಳಿತುಕೊಳ್ಳಿ, ಎನ್ನಬೇಕು.

ಉಪವಿಶಾಮಃ ।

ಬ್ರಾಹ್ಮಣನು 'ಕುಳಿತುಕೊಂಡೆ' ಎನ್ನಬೇಕು.

ಉಪವೀತಿ ।

ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳಬೇಕು.

ವಿಷ್ಟರಾಂತೇ ಪವಿತ್ರಂ ವಿಸರ್ಜಯೇತ್ ।

ಪವಿತ್ರವನ್ನು (ಮುಖ್ಯ ಕರ್ತೃವು ಮಾತ್ರ) ವಿಸರ್ಜನೆ ಮಾಡಬೇಕು.

ಪುನಃ ಪವಿತ್ರಂ ಧೃತ್ವಾ ।

ಬೇರೆ ಪವಿತ್ರವನ್ನು ಧರಿಸಬೇಕು.

ವಿ.ಸೂ. ದ್ವೌ ದೈವೇ ಪಿತೃಕೃತ್ಯೇ ತ್ರೀನ್ ಏಕೈಕ ಮುಭಯತ್ರ ಚ ।
ಭೋಜಯೇದೀಶ್ವರೋಽಪೀಹ ನ ಕುರ್ಯಾದ್ವಿಸ್ತರಂ ಬುಧಃ ॥

ಎಂದು ಮತ್ಸ್ಯಪುರಾಣದಲ್ಲಿ ಹೇಳಿರುವಂತೆ, ವಿಶ್ವೇದೇವರ ಸ್ಥಾನದಲ್ಲಿ ಎರಡು, ಪಿತೃಸ್ಥಾನದಲ್ಲಿ ಮೂರು, ಇಲ್ಲದಿದ್ದರೆ ಎರಡು ಸ್ಥಾನಗಳಲ್ಲೂ ಒಬ್ಬೊಬ್ಬರು, ಹೀಗೆ ಭೋಜನಕ್ಕಾಗಿ ನಿಮಂತ್ರಿಸಬೇಕು. ಧನಿಕನಾಗಿದ್ದರೂ ಈ ಸಂಖ್ಯೆಯನ್ನು ಹೆಚ್ಚಿಸಬಾರದು. (ಹೀಗೆ ಬ್ರಾಹ್ಮಣ ನಿಮಂತ್ರಣಕ್ಕೆ ವಿಧಿ ಇದೆ.)

ಪ್ರಾಣಾನಾಯಮ್ಯ ।

ಓಂ ಭೂಃ । ಓಂ ಭುವಃ । ಓಗ್ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಗ್ಂ ಸತ್ಯಮ್ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ।

ಧಿಯೋ ಯೋ ನಃ ಪ್ರಚೋದಯಾತ್ ॥ ಓಂ ಆಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಸ್ಸುವರೋಮ್ ॥

ಶ್ರೀ ಗೋವಿಂದ ಗೋವಿಂದ ಗೋವಿಂದ ಶ್ರೀಮನ್ಮಹಾವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ ....... ನಾಮಸಂವತ್ಸರೇ ....... ಪಕ್ಷೇ ...... ತಿಥೌ...... ವಾಸರಯುಕ್ತಾಯಾಂ ವಿಷ್ಣುನಕ್ಷತ್ರ ವಿಷ್ಣುಯೋಗ ವಿಷ್ಣುಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಪ್ರಾಚೀನಾವೀತಿ ಅಸ್ಮತ್ ಪಿತುಃ / ಅಸ್ಮನ್ಮಾತುಃ ಪ್ರತಿಸಾಂವತ್ಸರೀಕ ಮೃತಾಹಾನ್ನಶ್ರಾದ್ಧೇ ಭವದನುಜ್ಞಯಾ ಪ್ರಕ್ರಾಂತಂ ಶ್ರಾದ್ಧಕರ್ಮ ಕರಿಷ್ಯೇ ॥

ಶ್ರಾದ್ಧ ಕರ್ತೃಗಳೆಲ್ಲರೂ ಈ ರೀತಿ ಪ್ರಾಣಾಯಾಮ ಮಾಡಿ, ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳುವುದು.

ಬ್ರಾಹ್ಮಣರನ್ನು ಕುರಿತು "ನನ್ನ ತಂದೆಯ / ತಾಯಿಯ ಪ್ರತಿ ವರ್ಷವೂ ಆಚರಿಸುತ್ತಿರುವ ಶ್ರಾದ್ಧಕರ್ಮವನ್ನು ನೀವು ಅಪ್ಪಣೆ ಕೊಟ್ಟರೆ, ಈ ದಿನ ಆಚರಿಸುತ್ತೇನೆ" ಎನ್ನಬೇಕು. (ಶ್ರಾದ್ಧಕರ್ಮ ಇಲ್ಲಿಂದ ನೇರವಾಗಿ ಪ್ರಾರಂಭ).

ಕುರುಷ್ವ ।

ಆ ಬ್ರಾಹ್ಮಣರು 'ಹಾಗೆ ಮಾಡು' ಎನ್ನಬೇಕು.

ಅಪಹತಾ ಅಸುರಾ ರಕ್ಷಾಗ್ಂಸಿ ಪಿಶಾಚಾಃ । ಯೇ ಕ್ಷಯಂತಿ ಪೃಥಿವೀಮನು । ಅನ್ಯತ್ರೇತೋ ಗಚ್ಛಂತು ಯತ್ರೈಷಾಂ ಗತಂ ಮನಃ । ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಸ್ಸೋಮ್ಯಾಸಃ । ಅಸುಂ ಯ ಈಯುರವೃಕಾ ಋತಜ್ಞಾಸ್ತೇನೋವಂತು ಪಿತರೋ ಹವೇಷು ॥

ಇತಿ ಅಪ್ರದಕ್ಷಿಣಂ ತಿಲಾನ್ವಿಕಿರೇತ್ ॥

ರಾಕ್ಷಸ ಪಿಶಾಚಾದಿಗಳ ಬಾಧೆ ಇಲ್ಲದಂತಾಗಲೆಂದು ಈ ಮಂತ್ರದಿಂದ ಎಳ್ಳನ್ನು ಅಪ್ರದಕ್ಷಿಣವಾಗಿ ಶ್ರಾದ್ಧಕರ್ಮಗಳನ್ನು ಮಾಡುವ ಸ್ಥಳದಲ್ಲಿ ಎರಚುವುದು.

ಪಿತೃ ಪುರತಃ ಭೂಮಿಂ ಪ್ರೋಕ್ಷ್ಯ । ದರ್ಭೇಣ ಖಾತ್ವಾ । ಪುನಃ ಪ್ರೋಕ್ಷ್ಯ । ವರ್ತುಳಾಕಾರ ಮಂಡಲಂ ಕೃತ್ವಾ । ತಿಲದರ್ಭಾನ್ ನಿಧಾಯ ।

ಪಿತೃಸ್ಥಾನದ ಬ್ರಾಹ್ಮಣನ ಮುಂದೆ ಭೂಮಿಯನ್ನು ಕೂರ್ಚನಿಂದ ಪ್ರೋಕ್ಷಿಸಿ, ಮೂರು ತುಂಡು ದರ್ಭೆಗಳಿಂದ ಆ ಸ್ಥಳವನ್ನು ಗುಡಿಸಿ, ಪುನಃ ಆ ಸ್ಥಳವನ್ನು ಕೂರ್ಚದಿಂದ ಪ್ರೋಕ್ಷಿಸಿ, ವರ್ತುಳಾಕಾರ ಮಂಡಲ ಮಾಡಿ, ಮೂರು ತುಂಡು ದರ್ಭೆ ಮತ್ತು ಎಳ್ಳನ್ನು ಆ ಮಂಡಲದ ಮೇಲೆ ಇಡುವುದು.

ಉಪವೀತಿ ॥

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

**ವಿಶ್ವೇದೇವೋ ಹವೇಷು । ವಿಶ್ವೇದೇವ ಪುರತಃ ಭೂಮಿಂ ಪ್ರೋಕ್ಷ್ಯ । ದರ್ಭೇಣ ಮಾರ್ಜ್ಯ । ಪುನಃ ಪ್ರೋಕ್ಷ್ಯ । ಚತುರಶ್ರ ಮಂಡಲಂ ಕೃತ್ವಾ । ಯವದರ್ಭಾನ್ ನಿಧಾಯ ॥**

ವಿಶ್ವೇದೇವ ಸ್ಥಾನದ ಬ್ರಾಹ್ಮಣನ ಮುಂದೆ ಭೂಮಿಯನ್ನು ಕೂರ್ಚದಿಂದ ಪ್ರೋಕ್ಷಿಸಿ, ಎರಡು ತುಂಡು ದರ್ಭೆಗಳಿಂದ ಆ ಸ್ಥಳವನ್ನು ಗುಡಿಸಿ, ಪುನಃ ಆ ಸ್ಥಳವನ್ನು ಪ್ರೋಕ್ಷಿಸಿ, ಚೌಕವಾಗಿ ಅಲ್ಲಿ ಮಂಡಲವನ್ನು ಮಾಡಿ, ಎರಡು ತುಂಡು ದರ್ಭೆ ಮತ್ತು ತೊಳೆದ ಅಕ್ಕಿಯನ್ನು ಇಡುವುದು.

**ಪಾಕಾದೀನ್ ಗಾಯತ್ರ್ಯಾ ಪ್ರೋಕ್ಷಣಂ ಕುರ್ಯಾತ್ ।**

ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।

ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಶ್ಶುಚಿಃ ॥

ಶ್ರಾದ್ಧಕ್ಕಾಗಿ ಮಾಡಿರುವ ಪಾಕಾದಿಗಳು ಪವಿತ್ರವಾಗುವಂತೆ ಮಾಡಲು ಕಲಶೋದಕವನ್ನು ಉದ್ಧರಣೆಯಲ್ಲಿ ತೆಗೆದುಕೊಂಡು, ಕೂರ್ಚವನ್ನೂ, ಎರಡು ತುಳಸೀದಳಗಳನ್ನೂ ತೆಗೆದುಕೊಂಡು, ಅಡಿಗೆ ಇರುವ ಸ್ಥಲಕ್ಕೆ ಹೋಗಿ ಪಾಕ ಪದಾರ್ಥಗಳಿಗೆ ಈ ಮಂತ್ರ ಪ್ರೋಕ್ಷಿಸಿ, ಅನ್ನದ ತಪ್ಪಲೆಯಲ್ಲಿರುವ ಅನ್ನದ ಮೇಲೆ, ಪಾಯಸ ಮಾಡಿರುವ ಪಾತ್ರೆಯ ಪಾಯಸದ ಮೇಲೆ ಒಂದೊಂದು ತುಳಸೀದಳವನ್ನು ಹಾಕುವುದು.

**ಮಯಾ ಸಂಪಾದಿತಾಃ ಪದಾರ್ಥಾಃ ದೇಶತಃ ಕಾಲತಶ್ಚ ಸರ್ವೇ ಶ್ರಾದ್ಧಹವಿರ್ಯೋಗ್ಯಾ ಭವಂತ್ವಿತಿ ಭವಂತೋ ಬ್ರುವಂತು ॥**

"ನಾನು ಸಂಪಾದಿಸಿ ತಂದು ಪಾಕಮಾಡಿದ ಪಾಕಾದಿಗಳು ಶ್ರಾದ್ಧಕ್ಕೆ ಯೋಗ್ಯವಾದವುಗಳಾಗಿವೆಯಲ್ಲವೇ, ತಾವು ಹೇಳಿ" ಎಂದು ಬ್ರಾಹ್ಮಣರನ್ನು ಕೇಳಬೇಕು.

**ಶ್ರಾದ್ಧ ಯೋಗ್ಯಾ ಭವಂತು ।**

ಅದಕ್ಕೆ ಆ ಬ್ರಾಹ್ಮಣರು "ಶ್ರಾದ್ಧ ಯೋಗ್ಯವಾಗಿವೆ" ಎನ್ನಬೇಕು.

ಕಾಲಶ್ಚ ಮುಖ್ಯ ಕಾಲೋಽಸ್ತ್ವಿತಿ ಭವಂತೋ ಬ್ರುವಂತು ||

"ಶ್ರಾದ್ಧ ಪ್ರಾರಂಭಿಸಿರುವ ಕಾಲವು ಮುಖ್ಯಕಾಲವಾಗಿದೆಯಲ್ಲವೇ ಹೇಳಿ" ಎಂದು ಬ್ರಾಹ್ಮಣರನ್ನು ಕೇಳಬೇಕು.

ಕಾಲಶ್ಚ ಮುಖ್ಯ ಕಾಲೋಽಸ್ತು |

ಅದಕ್ಕೆ ಅವರು 'ಮುಖ್ಯ ಕಾಲವಾಗಿದೆ' ಎನ್ನಬೇಕು.

ಪಾಕಾದೀನಾಂ ಪವಿತ್ರತಾಸ್ತ್ವಿತಿ ಭವಂತೋ ಬ್ರುವಂತು ||

'ಪಾಕಾದಿಗಳು ಪವಿತ್ರತೆಯನ್ನು ಪಡೆದಿವೆಯಲ್ಲವೇ ಹೇಳಿ' ಎಂದು ಬ್ರಾಹ್ಮಣರನ್ನು ಕೇಳಬೇಕು.

ಪಾಕಾದೀನಾಂ ಪವಿತ್ರತಾಸ್ತು ||

ಅದಕ್ಕೆ ಅವರು 'ಪವಿತ್ರತೆಯನ್ನು ಪಡೆದಿವೆ' ಎನ್ನಬೇಕು.

ಶ್ರಾದ್ಧಕಾಲೇ ಗಯಾಂ ಧ್ಯಾತ್ವಾ, ಧ್ಯಾತ್ವಾ ದೇವಂ ಜನಾರ್ದನಂ |
ವಸ್ವಾದೀಂಶ್ಚ ಪಿತೄನ್ ಧ್ಯಾತ್ವಾ ತತಶ್ರಾದ್ಧಂ ಪ್ರವರ್ತಯೇ ||

ಈ ಶ್ರಾದ್ಧ ಕಾಲದಲ್ಲಿ ಗಯಾ ಕ್ಷೇತ್ರವನ್ನೂ, ಆ ಕ್ಷೇತ್ರಾಧಿಪತಿ ಜನಾರ್ದನನನ್ನೂ, ವಸುರುದ್ರಾದಿಗಳನ್ನೂ ಎಲ್ಲಾ ಪಿತೃಗಳನ್ನೂ ಧ್ಯಾನಿಸಿ, ಶ್ರಾದ್ಧವನ್ನು ಉಪಕ್ರಮಿಸುವೆನು ಎನ್ನಬೇಕು.

ಪ್ರವರ್ತಯ ||

ಬ್ರಾಹ್ಮಣರು 'ಉಪಕ್ರಮಿಸಬಹುದು' ಎನ್ನುವರು.

ವಿಶ್ವೇದೇವಪುರತಃ ಉದಙ್ಮುಖಿ ಉಪವಿಶ್ಯ ||

ವಿಶ್ವೇದೇವರ ಸ್ಥಾನದಲ್ಲಿ, ಪೂರ್ವಾಭಿಮುಖವಾಗಿ ಕುಳಿತಿರುವ ಬ್ರಾಹ್ಮಣನ ಮುಂದೆ ಉತ್ತರ ಮುಖವಾಗಿ ಶ್ರಾದ್ಧ ಕರ್ತೃವು ಕುಳಿತುಕೊಳ್ಳಬೇಕು.

ಹಸ್ತೋದಕಂ ದತ್ವಾ ||

ಕೂರ್ಚದಿಂದ ಬ್ರಾಹ್ಮಣನ ಕೈಗೆ ಹಸ್ತೋದಕವನ್ನು ಕೊಡಬೇಕು.

ಪುರೂರವಾರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಇದಮಿದಮಾಸನಮಾಸ್ಯತಾಮ್ ||

ಎರಡು ತುಂಡು ದರ್ಭೆಗಳನ್ನು ಬ್ರಾಹ್ಮಣನ ಬಲಗಡೆ ತೊಡೆಯ ಕೆಳಕ್ಕೆ ಹಾಕುವುದು. (ದರ್ಭಾಸನ ಪ್ರತ್ಯಾಮ್ನಾಯವಾಗಿ)

ಧರ್ಮೋಽಸಿ ಆಪಃ |

ಕೂರ್ಚದಿಂದ ಒಂದು ಸಾರಿ ಹಸ್ತೋದಕ ಕೊಡುವುದು.

ವಿಶ್ವೈರ್ದೇವದೇವೈಃ ಕ್ಷಣಃ ಕ್ರಿಯತಾಮ್ |

ಎರಡು ತುಂಡು ದರ್ಭೆಗಳು ಮತ್ತು ಅಕ್ಕಿಕಾಳು ತೆಗೆದುಕೊಂಡು, ಅಕ್ಕಿಕಾಳಿನಿಂದ ಆ ಬ್ರಾಹ್ಮಣನನ್ನು ಪೂಜಿಸಿ - ಕೈಗೆ ಎರಡು ತುಂಡು ದರ್ಭೆಗಳನ್ನು ಕೊಡುವುದು.

(ಹಿಂದೆ ವಿಶ್ವೇದೇವ ಸ್ಥಾನಕ್ಕೆ ಬ್ರಾಹ್ಮಣನಿಗೆ, ಆಸನ, ಕ್ಷಣ ಕೊಟ್ಟು, ಆಹ್ವಾನಿಸಿರುತ್ತೆ. ಈಗ ಎರಡನೇ ಬಾರಿ "ವಿಶ್ವೇದೇವರುಗಳನ್ನು" ಬ್ರಾಹ್ಮಣನ ಮೂಲಕ ಆಸನ, ಕ್ಷಣಗಳಿಂದ ಆಹ್ವಾನಿಸಿದೆ.)

ಓಂ ತಥಾ । ಪ್ರಾಪ್ನುವಂತು ಭವಂತಃ ॥

ಬ್ರಾಹ್ಮಣನನ್ನು ಕುರಿತು "ಕ್ಷಣವನ್ನು ಕೊಡುವುದರ ಮೂಲಕ ಕೇಳಿಕೊಂಡ ನನ್ನ ಪ್ರಾರ್ಥನೆ ಒಪ್ಪಿಗೆಯಾಯಿತಲ್ಲವೆ ?" ಎಂದು ಕೇಳಬೇಕು.

ಪ್ರಾಪ್ನುವಾಮ ।

ಅದಕ್ಕೆ ಬ್ರಾಹ್ಮಣನು 'ಒಪ್ಪಿಗೆಯಾಯಿತು' ಎನ್ನಬೇಕು.

ಅರ್ಘ್ಯಪಾತ್ರೇ ಆಸಾದ್ಯ । ಭೂಮೌ ನೈಋತ್ಯಾದೀಶಾನಾಂತಂ ದ್ವಿಧಾ ಪ್ರೋಕ್ಷ್ಯ । ಪ್ರೋಕ್ಷಿತ ಭೂಮೌ ದ್ವೌ ದ್ವೌ ದರ್ಭೌ ಪ್ರಾಗಗ್ರಾವಾಸ್ತೀರ್ಯ ॥

ವಿಶ್ವೇದೇವರ ಅರ್ಘ್ಯಕ್ಕಾಗಿ 2 ದೊನ್ನೆಗಳನ್ನು ತೆಗೆದುಕೊಳ್ಳುವುದು.




ಚಿತ್ರ. 5

ದೇ - ದೇವರುಗಳಿಗೆ ಅರ್ಘ್ಯ ಕೊಡಲು ಇಡುವ ದೊನ್ನೆ (ದೇವಪಾತ್ರ).

ವಿ - ವಿಶ್ವೇದೇವರುಗಳಿಗೆ ಅರ್ಘ್ಯ ಕೊಡಲು ಇಡುವ ದೊನ್ನೆ (ವಿಶ್ವೇದೇವ ಪಾತ್ರ).

ಪೂರ್ವಾಭಿಮುಖವಾಗಿ ವಿಶ್ವೇದೇವಸ್ಥಾನದಲ್ಲಿ ಕುಳಿತಿರುವ ಬ್ರಾಹ್ಮಣನ ಮುಂದುಗಡೆ ನೆಲವನ್ನು ನೈಋತ್ಯದಿಂದ ಈಶಾನ್ಯದ ಕಡೆಗೆ ಎರಡು ಕಡೆ ಕೂರ್ಚದಿಂದ ನಕ್ಷೆಯಲ್ಲಿ ತೋರಿಸಿರುವಂತೆ ಪ್ರೋಕ್ಷಿಸುವುದು.

"ದೇ" ಸ್ಥಳದಲ್ಲಿ ಎರಡು ತುಂಡು ದರ್ಭೆಗಳನ್ನೂ "ವಿ" ಸ್ಥಳದಲ್ಲಿ ಎರಡು ತುಂಡು ದರ್ಭೆಗಳನ್ನೂ ಪಶ್ಚಿಮದಿಂದ ಪೂರ್ವಾಗ್ರವಾಗಿ ಇಡುವುದು.

ಪಾತ್ರದ್ವಯಂ ನ್ಯಗ್ಬಿಲಮಾಸಾದ್ಯ (ಅಧೋಮುಖಂ ನಿಕ್ಷಿಪ್ಯ) ।

ಎರಡು ದೊನ್ನೆಗಳನ್ನು ತೆಗೆದುಕೊಂಡು ಒಂದನ್ನು ಮೊದಲು "ದೇ" ಸ್ಥಳದಲ್ಲೂ ಇನ್ನೊಂದನ್ನು ಆಮೇಲೆ "ವಿ" ಸ್ಥಳದಲ್ಲೂ ಇನ್ನೊಂದನ್ನು ಆಮೇಲೆ "ವಿ" ಸ್ಥಳದಲ್ಲೂ ಬೋರಲು ಹಾಕುವುದು. (ಚಿತ್ರ ಮುಂದಿನ ಪುಟದಲ್ಲಿ)

ಉಪರಿ ದ್ವೌ ದ್ವೌ ದರ್ಭೌ ಆಸ್ತೀರ್ಯ ।

ಆದರ ಮೇಲೆ ಎರಡೆರಡು ದರ್ಭೆಗಳನ್ನು ಇಡುವುದು.

ಪ್ರೋಕ್ಷ್ಯ ।

ಕೂರ್ಚದ ನೀರಿನಿಂದ ಅವುಗಳನ್ನು (ಮೊದಲು "ದೇ", ಆಮೇಲೆ "ವಿ" ಈ ಕ್ರಮದಿಂದ) ಪ್ರೋಕ್ಷಿಸುವುದು.

ಉದ್ಧೃತ್ಯ ।

ಅದೇ ಕ್ರಮದಿಂದ ಬೋರಲು ಹಾಕಿರುವ ದೊನ್ನೆಗಳನ್ನು ಸರಿಯಾಗಿ ಇಡುವುದು.

ಉತ್ತಾನೇ ಪ್ರೋಕ್ಷ್ಯ ।

ಅದೇ ಕ್ರಮದಿಂದ ಅವುಗಳನ್ನು ಕೂರ್ಚದಿಂದ ಪ್ರೋಕ್ಷಿಸುವುದು.

ಯವಾನ್ವಿಕೀರ್ಯ ।

ಎರಡು ದೊನ್ನೆಗಳಿಗೂ (ಮೊದಲು "ದೇ" ದೊನ್ನೆ, ಆಮೇಲೆ "ವಿ" ದೊನ್ನೆ) ಈ ಕ್ರಮದಿಂದ ಸ್ವಲ್ಪ ಸ್ವಲ್ಪ ಅಕ್ಕಿಕಾಳನ್ನು ಹಾಕುವುದು.

ಉದಕಂ ಪೂರಯಿತ್ವಾ ।

ಎರಡು ದೊನ್ನೆಗಳಿಗೂ ಮೇಲಿನ ಕ್ರಮದಿಂದ ಎರಡೆರಡು ಉದ್ಧರಣೆ ಕಲಶೋದಕವನ್ನು ಹಾಕುವುದು.

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥

ದೇವೇಭ್ಯೋ ಜುಷ್ಟಂ ಗೃಹ್ಣಾಮಿ ।

ಈ ಮಂತ್ರ ಹೇಳಿಕೊಂಡು ಎರಡು ಕೈಗಳಿಂದ ಕೂಡಿದ ಬೊಗಸೆಯನ್ನು "ದೇ" ದೊನ್ನೆಗೆ ತೋರಿಸುವುದು.

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥

ವಿಶ್ವೇಭ್ಯೋ ದೇವೇಭ್ಯೋ ಜುಷ್ಟಂ ಗೃಹ್ಣಾಮಿ ॥

ಇದೇ ಮಂತ್ರ ಹೇಳಿಕೊಂಡು ಎರಡು ಕೈಗಳಿಂದ ಕೂಡಿದ ಬೊಗಸೆಯನ್ನು ''ವಿ'' ದೊನ್ನೆಗೆ ತೋರಿಸುವುದು. ದೇವತೆಗಳೆ, ವಿಶ್ವೇದೇವತೆಗಳೆ, ನಿಮ್ಮ ಸೇವೆ ಮಾಡುತ್ತೇನೆ ಎಂದು ಪ್ರಾರ್ಥಿಸುವುದು.

ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧುಸಂಯುತಃ ।
ನಿರ್ಣೋದಸ್ಸರ್ವಪಾಪಾನಾಂ ಪವಿತ್ರಮೃಷಿಭಿಸ್ಸ್ಮೃತಮ್ ॥

ಈ ಮಂತ್ರದಿಂದ ಇದೇ ಕ್ರಮದಲ್ಲಿ ಎರಡು ದೊನ್ನೆಗಳಿಗೂ ಅಕ್ಕಿಕಾಳು ಹಾಕುವುದು. ಎರಡು ದೊನ್ನೆಗಳಿಗೆ ಅಕ್ಕಿ ಹಾಕುವಾಗಲೂ ಒಂದೊಂದು ಬಾರಿ ಈ ಶ್ಲೋಕವನ್ನು ಹೇಳುವುದು.

ಅರ್ಘ್ಯಪಾತ್ರಯೋಃ ಅಯಮಯಂ ಗಂಧಃ ।

ಉದ್ಧರಣೆಯಲ್ಲಿ ಕಲಶೋದಕದ ನೀರನ್ನು ತೆಗೆದುಕೊಂಡು ಅದಕ್ಕೆ ತೇದ ಶ್ರೀಗಂಧವನ್ನು ಹಾಕಿ ಬೆರಸಿ, ಎರಡು ದೊನ್ನೆಗಳಿಗೂ 'ದೇ' 'ವಿ' ಕ್ರಮದಿಂದ ಸ್ವಲ್ಪ ಸ್ವಲ್ಪ ಹಾಕುವುದು.

ಇಮಾನಿವಃ ಶ್ರೀತುಲಸೀ ಭೃಂಗರಾಜ ದರ್ಭಪತ್ರ ಯೂಧಿಕಾ ಕುಸುಮ ಕುಶಾಗ್ರಾಣಿ ಚ ಸ್ವಾಹಾ ನಮಮ ನಮಮ ॥

ಎರಡು ದೊನ್ನೆಗಳಿಗೂ ಇದೇ ಕ್ರಮದಿಂದ ದರ್ಭೆಚೂರು, ತುಳಸಿ, ಬಿಡಿ ಹೂವು ಮುಂತಾದವುಗಳನ್ನು ಹಾಕುವುದು.

ದೇವಪಾತ್ರಂ ಸಂಪನ್ನಮ್ । ವಿಶ್ವೇದೇವಪಾತ್ರಂ ಸಂಪನ್ನಮ್ ॥

(ದೇವ, ವಿಶ್ವೇದೇವ ಎಂದು ಹೇಳಿರುವುದರಿಂದ ಎಲ್ಲಾ ದೇವಗಣಗಳನ್ನೂ ಆಹ್ವಾನಿಸಿದಂತಾಯ್ತು.)

(ಯೂಧಿಕಾ - ಮುಳ್ಳುಸೇವಂತಿಗೆ, ಭೃಂಗರಾಜ - ಗರಗದ ಸೊಪ್ಪು.)

ಮೊದಲು 'ದೇ' ದೊನ್ನೆಯ ನೀರನ್ನು ಆಮೇಲೆ 'ವಿ' ದೊನ್ನೆಯ ನೀರನ್ನು ಎರಡು ತುಂಡು ದರ್ಭೆಗಳಿಂದ ತೊಳಸುವುದು.

ಸುಸಂಪನ್ನಮ್ ।

ವಿಶ್ವೇದೇವ - ಸ್ಥಾನದ ಬ್ರಾಹ್ಮಣನು ''ಚೆನ್ನಾಗಿ ತೊಳಸಿ ಆಯಿತು'' ಎನ್ನಬೇಕು.

ಸಂಪಾದಿತಃ ಸ್ವಾಹಾರ್ಘ್ಯಾ ಸ್ವಾಹಾರ್ಘ್ಯಾ ।

ಎರಡು ದೊನ್ನೆಗಳಿಗೂ ಮೇಲಿನ ಕ್ರಮದಲ್ಲಿ ಕೂರ್ಚದಿಂದ ಅರ್ಘ್ಯ ಕೊಡುವುದು.

ಸಂತೃಪ್ತಾರ್ಘ್ಯಾ ।

''ಅರ್ಘ್ಯ ಸರಿಯಾಗಿ ಕೊಟ್ಟಂತಾಯ್ತು'' ಎಂದು ವಿಶ್ವೇದೇವ - ಸ್ಥಾನದ ಬ್ರಾಹ್ಮಣನು ಹೇಳಬೇಕು.

ಹಸ್ತೋದಕಂ ದತ್ವಾ ।

ಅನಂತರ ವಿಶ್ವೇದೇವ - ಸ್ಥಾನದ ಬ್ರಾಹ್ಮಣನಿಗೆ ಕೂರ್ಚದಿಂದ ಒಂದು ಗಂಧ ಪುಷ್ಪೋದಕ ಕೊಡುವುದು.

ಪುರೂರವಾರ್ದ್ರವ ಸಂಜ್ಞಕಾನ್ ವಿಶ್ವಾನ್ ದೇವಾನ್ ಭವತ್ಸು ಆವಾಹಯಿಷ್ಯೇ ।

ಪುರೂರವ ಆರ್ದ್ರವ ಸಂಜ್ಞಕರಾದ ವಿಶ್ವೇದೇವರುಗಳನ್ನು ನಿಮ್ಮಲ್ಲಿ ಆವಾಹಿಸುತ್ತೇನೆ ಎನ್ನಬೇಕು.

(ಪುರೂರವ, ಆರ್ದ್ರವ ಎಂದು ವಿಶ್ವೇದೇವತೆಗಳಲ್ಲಿ ಇಬ್ಬರಿಗಾಗಿಯೇ ಎರಡು ದೊನ್ನೆಗಳನ್ನು ಇಡುತ್ತಾರೆಂದು ಕೆಲವರು ಹೇಳುತ್ತಾರೆ. ಆದರೆ ಮಂತ್ರದಲ್ಲಿ ದೇವಪಾತ್ರೇ ಸಂಪನ್ನೇ - ವಿಶ್ವೇದೇವಪಾತ್ರೇ ಸಂಪನ್ನೇ ಎಂದಿದೆಯಾಗಿ ದೇವತೆಗಳಿಗೆಲ್ಲಾ ಒಂದು ದೊನ್ನೆ, ವಿಶ್ವೇದೇವರುಗಳಿಗೆಲ್ಲಾ ಒಂದು ದೊನ್ನೆ ಎಂದು ಅರ್ಥವಾಗುತ್ತದೆ. ವಿಶ್ವೇದೇವರುಗಳು ದೇವತೆಗಳೂ ಎರಡೂ ಸೇರಿ ದೇವಗಣಗಳಾಗುವುವು.)

ಆವಾಹಯ ।

ಅದಕ್ಕೆ ವಿಶ್ವೇದೇವ - ಸ್ಥಾನದ ಬ್ರಾಹ್ಮಣನು 'ಆವಾಹಿಸು' ಎನ್ನಬೇಕು.*

ವಿಶ್ವೇದೇವಾ ಸ ಆಗತಶ್ಶೃಣುತಾಮ ಇಮಂ ಹವಂ । ಏದಂ ಬರ್ಹಿರ್ನಿಷೀದತ ವಿಶ್ವೇದೇವಾಶ್ಶೃಣುತೇಮಗ್ಂ ಹವಮ್ಮೇ ಯೇ ಅಂತರಿಕ್ಷೇ ಯ ಉಪದ್ಯವಿಷ್ಠ । ಯೇ ಅಗ್ನಿ ಜಿಹ್ವಾ ಉತ ವಾ ಯಜತ್ರಾ ಆಸದ್ಯಾಸ್ಮಿನ್ಬರ್ಹಿಷಿಮಾದಯಧ್ವಮ್ ॥

ಈ ಮಂತ್ರದಿಂದ ವಿಶ್ವೇದೇವರನ್ನು ಬ್ರಾಹ್ಮಣನಲ್ಲಿ ಆವಾಹಿಸಬೇಕು. ವಿಶ್ವೇದೇವ - ಸ್ಥಾನದ ಬ್ರಾಹ್ಮಣನ ತಲೆಯಮೇಲೆ ಎರಡು ತುಂಡು ದರ್ಭೆಗಳನ್ನಿಟ್ಟು, ಅಕ್ಷತೆ ತೆಗೆದುಕೊಂಡು, ಬಲತೊಡೆಯಿಂದ ಪ್ರಾರಂಭವಾಗಿ ತಲೆಯವರೆಗೆ ಬಲಗಡೆ ಪೂಜಿಸಬೇಕು.

ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ ।
ಯೇಽತ್ರ ವಿಹಿತಾ ಶ್ರಾದ್ಧೇ ಸಾವಧಾನಾ ಭವಂತು ತೇ ॥
ಪುರೂರವಾರ್ದ್ರವ ಸಂಜ್ಞಿಕಾ ವಿಶ್ವೇದೇವಾಃ ಸಾವಧಾನಾ ಭವಂತು ತೇ ॥

ವಿಶ್ವೇದೇವತೆಗಳೇ, ಸಾವಧಾನವಾಗಿ ಉಪಚಾರವನ್ನು ಸ್ವೀಕರಿಸಿ ಎನ್ನಬೇಕು.

---

* ವಿಶೇಷ ವಿಷಯ : ಆಹ್ವಾನಿತ ಬ್ರಾಹ್ಮಣರುಗಳು, ತಾವು ವಿಶ್ವೇದೇವ, ಪಿತೃಸ್ಥಾನಗಳಲ್ಲಿ ಆವಾಹಿತರಾಗುತ್ತಿರುವಾಗ, ಈ ಕೆಳಗಿನ ಮಂತ್ರಗಳನ್ನು, ಪ್ರತಿಯೊಂದನ್ನೂ, ಮೂರು ಬಾರಿ ಜಪಿಸಬೇಕು.

1) "ಓಂ ಭೂರ್ಭುವಸ್ಸುವಃ ..... ಪ್ರಚೋದಯಾತ್" ಎಂಬ ಗಾಯತ್ರೀ ಮಂತ್ರ.
2) "ಓಂ ನಮೋ ಭಗವತೇ ವಾಸುದೇವಾಯ" ಎಂಬ ವಿಷ್ಣು ದ್ವಾದಶಾಕ್ಷರೀಮಂತ್ರ.
3) "ಓಂ ತ್ರ್ಯಂಬಕಂ ಯಜಾಮಹೇ ....... ತಾತ್".
4) "ದೇವಾತಾಭ್ಯಃ ......... ನಮೋ ನಮಃ" ಎಂಬ ಪಿತೃ ಮಂತ್ರ.

ಸಾವಧಾನಾ ಸ್ಮಃ ।

ವಿಶ್ವೇದೇವಸ್ಥಾನದ ಬ್ರಾಹ್ಮಣನು 'ಆಗಬಹುದು' ಎನ್ನಬೇಕು.

ಹಸ್ತೋದಕಂ ದತ್ವಾ ।

ಆಮೇಲೆ ಈ ಬ್ರಾಹ್ಮಣನಿಗೆ ಕೂರ್ಚದಿಂದ ಒಂದು ಸಾರಿ ಹಸ್ತೋದಕ ಕೊಡಬೇಕು.

ಯಾ ದಿವ್ಯಾ ಆಪಃ ಪಯಸಾ ಸಂಬಭೂವುಃ । ಯಾ ಅಂತರಿಕ್ಷ ಉತ ಪಾರ್ಥಿವೀರ್ಯಾಃ । ಹಿರಣ್ಯವರ್ಣಾ ಯಜ್ಞಿಯಾಸ್ತಾನ ಆಪಶ್ಶಗ್ಂ ಸ್ಯೋನಾ ಭವಂತು ॥

ಪುರೂರವ ಸಂಜ್ಞಕಾ ವಿಶ್ವೇ ದೇವಾ ಇದಂ ವೋ ಅರ್ಘ್ಯಮ್ ।

ಈ ವಿಶ್ವೇದೇವ - ಸ್ಥಾನದ ಬ್ರಾಹ್ಮಣನ ಬಲಅಂಗೈ ಮೇಲೆ, ದೇವಪಾತ್ರೆ ''ದೇ'' ದೊನ್ನೆಯ ಮತ್ತು ವಿಶ್ವೇದೇವ - ಸ್ಥಾನಪಾತ್ರೆ ''ವಿ'' ದೊನ್ನೆಯ ಮೇಲಿನ ದರ್ಭೆಗಳನ್ನಿಟ್ಟು, ಆ ಅಂಗೈಮೇಲೆ ತನ್ನ ಬಲಗೈಯನ್ನು ಅಂಗೈ ಮೇಲಾಗಿ ಇಟ್ಟುಕೊಂಡು, ತನ್ನ ಅಂಗೈನಲ್ಲಿ ಆ ಎರಡು ದೊನ್ನೆಗಳ ಕೆಳಗಿನ ದರ್ಭೆಗಳನ್ನಿಟ್ಟುಕೊಂಡು -

ದೇವಪಾತ್ರೆ ''ದೇ'' ದೊನ್ನೆಯನ್ನು ಎಡಗೈಲಿ ಹಿಡಿದುಕೊಂಡು, ಈ ಮಂತ್ರವನ್ನು ಹೇಳುತ್ತಾ ಬಲಗೈಯಿಂದ ಬ್ರಾಹ್ಮಣನಿಗೆ ಅರ್ಘ್ಯವನ್ನು ಕೊಡುವುದು.

ಅಸ್ತ್ವರ್ಘ್ಯಮ್ ।

ಆ ಬ್ರಾಹ್ಮಣನು 'ಅರ್ಘ್ಯ ಸಂದಿತು' ಎನ್ನಬೇಕು.

ತತಶ್ಶುದ್ಧೋದಕಮ್ ।

ಆಮೇಲೆ, ಕಳಶದ ನೀರಿನಲ್ಲಿ ಕೂರ್ಚವನ್ನು ಅದ್ದಿ, ಆ ಕೂರ್ಚದ ನೀರಿನಿಂದ ಇಬ್ಬರ ಕೈಗಳನ್ನು ಪ್ರೋಕ್ಷಿಸಿಕೊಳ್ಳುವುದು. (ಕೈಗಳನ್ನೂ ಕೈಯಲ್ಲಿರುವ ದರ್ಭೆಗಳನ್ನೂ ಹಾಗೆಯೇ ಇಟ್ಟುಕೊಂಡಿರುವುದು.)

ಯಾ ದಿವ್ಯಾ ಆಪಃ ಪಯಸಾ ಸಂಬಭೂವುಃ । ಯಾ ಅಂತರಿಕ್ಷ ಉತ ಪಾರ್ಥಿವೀರ್ಯಾಃ । ಹಿರಣ್ಯವರ್ಣಾ ಯಜ್ಞಿಯಾಸ್ತಾನ ಆಪಶ್ಶಗ್ಂ ಸ್ಯೋನಾ ಭವಂತು ॥ ಆರ್ದ್ರವ ಸಂಜ್ಞಕಾ ವಿಶ್ವೇದೇವಾ ಇದಂ ವೋ ಅರ್ಘ್ಯಮ್ ॥

ಪುನಃ ಹಿಂದಿನ ಕ್ರಮದಂತೆ - ತನ್ನ ಅಂಗೈಗೆ ವಿಶ್ವೇದೇವ ಪಾತ್ರೆಯಿಂದ ('ವಿ' ದೊನ್ನೆಯಿಂದ) ಒಂದು ಉದ್ಧರಣೆ ಅರ್ಘ್ಯೋದಕವನ್ನು ಹಾಕಿಕೊಂಡು ಅದರಿಂದ ಬ್ರಾಹ್ಮಣನ ಕೈಗೆ ಈ ಮಂತ್ರದಿಂದ ಅದೇ ದೇವ ತೀರ್ಥದಿಂದ ಅರ್ಘ್ಯಕೊಡುವುದು.

ಅಸ್ತ್ವರ್ಘ್ಯಮ್ ।

ಬ್ರಾಹ್ಮಣನು 'ಅರ್ಘ್ಯ ಸಂದಿತು' ಎನ್ನಬೇಕು.

ತತಶ್ಶುದ್ಧೋದಕಂ ।

ಕಲಶದ ನೀರಿನಲ್ಲಿ ಕೂರ್ಚವನ್ನು ಅದ್ದಿಕೊಂಡು ಆ ಕೂರ್ಚದ ನೀರಿನಿಂದ ಇಬ್ಬರ ಕೈಗಳಿಗೂ ಪ್ರೋಕ್ಷಿಸಿಕೊಳ್ಳುವುದು.

ವಿಶ್ವೇಭ್ಯೋ ದೇವೇಭ್ಯಃ ಪಾತ್ರಯೋ ಸ್ಥಾನೇ ಸ್ಥಃ । ಸ್ವಸ್ಥಾನಮಸೀತಿ ನಿಧಾಯ ॥

ಶ್ರಾದ್ಧಕರ್ತೃವು ತನ್ನಲ್ಲಿನ ಕೂರ್ಚದಿಂದ ಬ್ರಾಹ್ಮಣನ ಬಲಪಕ್ಕದಲ್ಲಿ ನೆಲದ ಮೇಲೆ ನೀರನ್ನು ಪ್ರೋಕ್ಷಿಸಿ ತನ್ನ ಕೈಯ್ಯಲ್ಲಿರುವ ದರ್ಭೆಗಳನ್ನಿಟ್ಟು ನಂತರ ವಿಶ್ವೇದೇವ ಪಾತ್ರೆಯನ್ನು - 'ವಿ' ದೊನ್ನೆಯನ್ನು ದೇವ ಪಾತ್ರೆ 'ದೇ' ದೊನ್ನೆಯಲ್ಲಿಟ್ಟು ದರ್ಭೆಯ ಮೇಲೆ ಆ ದೇವಪಾತ್ರೆಯನ್ನು ('ದೇ' ದೊನ್ನೆಯನ್ನು) ವಿಶ್ವೇದೇವಸ್ಥಾನದ ಬ್ರಾಹ್ಮಣನ ಬಲಪಕ್ಕದಲ್ಲಿ ಇಡುವುದು. ಬ್ರಾಹ್ಮಣನ ಕೈಲಿದ್ದ -ದೊನ್ನೆಗಳ ಮೇಲಿನ ದರ್ಭಗಳನ್ನು ಆ 'ದೇ' ದೊನ್ನೆಯ ಮೇಲೆ ಇಡುವುದು.

ಹಸ್ತೋದಕಂ ದತ್ವಾ ।

ಆಮೇಲೆ, ವಿಶ್ವೇದೇವರ ಸ್ಥಾನದ ಬ್ರಾಹ್ಮಣನಿಗೆ ಕೂರ್ಚದಿಂದ ಒಂದು ಸಾರಿ ಹಸ್ತೋದಕ ಕೊಡುವುದು.

**ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್ ॥**

ಪುರೂರವಾರ್ದ್ರವ ಸಂಜ್ಞಕಾ ವಿಶ್ವೇದೇವಾಃ ಯಥಾ ಭಾಗಶಃ ಅಮೀ ವೋ ಗಂಧಾಃ ।

ಈ ಮಂತ್ರದಿಂದ - ತೇದು ದೊನ್ನೆಯಲ್ಲಿಟ್ಟುಕೊಂಡಿರುವ ಗಂಧದಲ್ಲಿ ಸ್ವಲ್ಪ ಗಂಧವನ್ನು ಒಂದು ಬಾಳೆಲೆಯ ಸಣ್ಣ ಚೂರಿಗೆ ಹಾಕಿ - ಅದನ್ನು ವಿಶ್ವೇದೇವ ಸ್ಥಾನದ ಬ್ರಾಹ್ಮಣನಿಗೆ ಕೊಡುವುದು.

ಗಂಧವನ್ನು ಕೊಡುವಾಗ ಪವಿತ್ರವನ್ನು ಅಂಗೈ ಒಳಗೆ ತಿರುಗಿಸಿಕೊಂಡಿದ್ದು ಗಂಧವನ್ನು ಕೊಟ್ಟು ನಂತರ ಪುನಃ ಮೊದಲಿನಂತೆ ಧರಿಸುವುದು.

ಸುಗಂಧಾಃ ॥

ಆ ಬ್ರಾಹ್ಮಣನು 'ಒಳ್ಳೆ ಗಂಧ ದೊರೆಯಿತು' ಎನ್ನಬೇಕು.

**ಆಯನೇತೇ ಪರಾಯಣೇ ದೂರ್ವಾರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ।**

(ವಸ್ತ್ರವನ್ನೇ ಕೊಡುವುದಾದರೆ, ಆಚ್ಛಾದನಾರ್ಥಂ ವಸ್ತ್ರಯುಗ್ಮಮಾಚ್ಛಾದನಂ ಎಂದು ಹೇಳಬೇಕು).

ಅಸ್ತ್ವಾಚ್ಛಾದನಮ್ ।

ಬ್ರಾಹ್ಮಣನು 'ಹೊದೆಯಲು ವಸ್ತ್ರ ದೊರಕಿದಂತಾಯಿತು'. ಎನ್ನಬೇಕು.

ಪವಿತ್ರಾರ್ಥಾವಿಮೌ ಕುಶೌ ।

ಪವಿತ್ರ ಧಾರಣೆಗಾಗಿ ಬ್ರಾಹ್ಮಣನಿಗೆ 2 ಉದ್ದವಾದ ದರ್ಭೆಗಳನ್ನು ಕೊಡುವುದು.

(ಬ್ರಾಹ್ಮಣನು ಇದರಲ್ಲಿ ಪವಿತ್ರ ಕಟ್ಟಿಕೊಂಡು ತನ್ನ ಬಲಗೈ ಅನಾಮಿಕಾ ಬೆರಳಿಗ ಹಾಕಿಕೊಂಡು ಆಪೋಶನ ಸ್ವೀಕರಿಸಬೇಕು).

(ಊಟಮಾಡುವಾಗ, ಎಲೆಯ ಬಳಿ ಇಟ್ಟುಕೊಂಡಿದ್ದು, ಉತ್ತರಾಪೋಶನದ ಸಮಯದಲ್ಲಿ ಪುನಃ ಧರಿಸಿ, ಆಮೇಲೆ ಆ ಪವಿತ್ರವನ್ನು, ಬಲಗೈನಲ್ಲಿಯೇ ಬಿಚ್ಚಿಕೊಂಡು ಎಲೆಯ ಮೇಲೆ ಹಾಕಬೇಕು.)

ಸುಕುಶೌ ।

'ಒಳ್ಳೆ ದರ್ಭೆಗಳು ದೊರಕಿದುವು' ಎಂದು ಬ್ರಾಹ್ಮಣ ಹೇಳಬೇಕು.

ಅರ್ಚನವಿಧೇಸ್ಸಂಪೂರ್ಣತಾಸ್ತು ।

ಅರ್ಚನೆ ಪೂರ್ಣವಾಯಿತು ಎಂದು ಕರ್ತೃವು ಹೇಳಿದರೆ

ಅಸ್ತು ।

ಬ್ರಾಹ್ಮಣನು 'ಹೌದು' ಎನ್ನಬೇಕು.

ಯಥಾವಿಧ್ಯರ್ಚಿತಂ ।

ವಿಧಿವತ್ತಾಗಿ ಅರ್ಚಿಸಿದೆನೆಂದು ಕರ್ತೃ ಹೇಳಿದರೆ

ಅಸ್ತು ।

'ಹೌದು' ಎಂದು ಬ್ರಾಹ್ಮಣನು ಹೇಳಬೇಕು.

ಸಂಕಲ್ಪ ಸಿದ್ಧಿರಸ್ತ್ವಿತಿ ಭವನ್ತೋ ಬ್ರುವಂತು ।

'ನನ್ನ ಸಂಕಲ್ಪ ಸಿದ್ಧಿಸಿತಲ್ಲವೆ ?' ಎಂದು ಕರ್ತೃವು ಕೇಳಬೇಕು.

ಅಸ್ತು ಸಂಕಲ್ಪಸಿದ್ಧಿಃ ।

ಬ್ರಾಹ್ಮಣನು 'ಸಿದ್ಧಿಸಿತು' ಎನ್ನಬೇಕು.

ಯುಷ್ಮದನುಜ್ಞಯಾ, ಮಮ ಪಿತೄಣಾಂ (ಮಾತೄಣಾಂ) ಅರ್ಚನಂ ಕರಿಷ್ಯೇ ।

ವಿಶ್ವೇದೇವ ಸ್ಥಾನದ ಬ್ರಾಹ್ಮಣನನ್ನು ಕುರಿತು, ಕರ್ತೃವು 'ನಿಮ್ಮ ಅಪ್ಪಣೆ ಆದು ಪಿತೃಗಳನ್ನು ಅರ್ಚಿಸುತ್ತೇನೆ' ಎಂದು ಕೇಳಬೇಕು.

ಕುರುಷ್ವ ।

ಅದಕ್ಕೆ ಆ ಬ್ರಾಹ್ಮಣನು 'ಹಾಗೆ ಮಾಡು' ಎನ್ನಬೇಕು.

ಪ್ರಾಚೀನಾವೀತಿ । ಹಸ್ತೋದಕಂ ದತ್ವಾ ॥

ಜನಿವಾರವನ್ನು ಎಡಕ್ಕೆ ಹಾಕಿಕೊಂಡು, ಪಿತೃಸ್ಥಾನದ ಬ್ರಾಹ್ಮಣನಿಗೆ ಒಂದು ಸಲ ಕೂರ್ಚದಿಂದ ಹಸ್ತೋದಕ ಕೊಡುವುದು.

ಅಸ್ಮತ್ ಪಿತುಃ (ತಾಯಿ ಶ್ರಾದ್ಧದಲ್ಲಿ, ಅಸ್ಮನ್ಮಾತುಃ) ಪ್ರತಿಸಾಂವತ್ಸರೀಕ ಮೃತಾಹಾನ್ನಶ್ರಾದ್ಧೇ ಅಸ್ಮತ್ ಪಿತೃ-ಪಿತಾಮಹ-ಪ್ರಪಿತಾಮಹಾನಾಂ (ತಾಯಿ ಶ್ರಾದ್ಧದಲ್ಲಿ ಅಸ್ಮನ್ಮಾತೃ ಪಿತಾಮಹೀ ಪ್ರಪಿತಾಮಹೀನಾಂ) ....... **ಗೋತ್ರಾಣಾಂ ....... ಶರ್ಮಣಾಂ** (ತಾಯಿ ಶ್ರಾದ್ಧದಲ್ಲಿ ....... ದಾಯೀನಾಂ) ವಸು, ರುದ್ರ, ಆದಿತ್ಯರೂಪಾಣಾಂ ಇದಮಿದಮಾಸನಮ್ ಆಸ್ಯತಾಮ್ ।

ಈ ಮಂತ್ರದಿಂದ 3 ತುಂಡು ದರ್ಭೆಗಳನ್ನು ಪಿತೃಸ್ಥಾನದ ಬ್ರಾಹ್ಮಣನ ಎಡ ತೊಡೆಯ (ಆಸನಕ್ಕೆ ಬದಲಾಗಿ) ಕೆಳಕ್ಕೆ ಹಾಕುವುದು.

ಸುಖಾಸನಮ್ ।

'ಒಳ್ಳೆಯ ಆಸನ ದೊರಕಿತು' ಎಂದು ಬ್ರಾಹ್ಮಣನು ಹೇಳುವನು.

ಘರ್ಮೋऽಸಿ ಆಪಃ ।

ಈ ಮಂತ್ರದಿಂದ ಕೂರ್ಚದಲ್ಲಿ ಒಂದು ಸಲ ಪಿತೃಸ್ಥಾನದ ಬ್ರಾಹ್ಮಣನಿಗೆ ಹಸ್ತೋದಕ ಕೊಡುವುದು.

ಅಸ್ಮತ್ ಪಿತುಃ (ತಾಯಿ ಶ್ರಾದ್ಧದಲ್ಲಿ ಅಸ್ಮನ್ಮಾತುಃ) ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧೇ ಕ್ಷಣಃ ಕ್ರಿಯತಾಮ್ ।

ಈ ಮಂತ್ರಗಳಿಂದ 3 ತುಂಡು ದರ್ಭೆಗಳನ್ನು ಮತ್ತು ಸ್ವಲ್ಪ ಕರಿ ಎಳ್ಳನ್ನು ತೆಗೆದುಕೊಂಡು - ಎಳ್ಳಿನಿಂದ ಪಿತೃಸ್ಥಾನದ ಬ್ರಾಹ್ಮಣನನ್ನು ಪೂಜಿಸಿ, ಕೈಗೆ ಆ ತುಂಡು ದರ್ಭೆಗಳನ್ನು ಕೊಡುವುದು. ('ಕ್ಷಣ'ವನ್ನು ಕೊಡುವುದು). ಇದೇ ಆಹ್ವಾನ.

ಓಂ ತಥಾ । ಪ್ರಾಪ್ನುವಂತು ಭವಂತಃ ।

ಈ ರೀತಿ ಕ್ಷಣವನ್ನು ಕೊಟ್ಟು ಆಹ್ವಾನಿಸಿದ್ದು ನಿಮಗೆ ಒಪ್ಪಿಗೆಯಾಯಿತಲ್ಲವೆ ? ಎಂದು ಕೇಳಬೇಕು.

ಪ್ರಾಪ್ನವಾಮ ।

ಒಪ್ಪಿಗೆಯಾಯಿತು' ಎಂದು ಬ್ರಾಹ್ಮಣನು ಹೇಳಬೇಕು.

ಅರ್ಘ್ಯಪಾತ್ರಾಣ್ಯಾಸಾದ್ಯ ।

ಪಿತೃಗಳ ಅರ್ಘ್ಯಕ್ಕಾಗಿ 3 ದೊನ್ನೆಗಳನ್ನು (ಅರ್ಘ್ಯಪಾತ್ರ) ತರುವುದು.

ವಾಯವ್ಯಾದಾಗ್ನೇಯಾಂತಂ ತ್ರಿಃಪ್ರದೇಶೇ ಪ್ರೋಕ್ಷಿತಭೂಮೌ ತ್ರೀಣಿ ತ್ರೀಣಿ ದರ್ಭಾನ್ ದಕ್ಷಿಣಾಗ್ರಾನ್ನಿಧಾಯ ಪಾತ್ರತ್ರಯಂ ನ್ಯಗ್ಮಿಲಮಾಸಾದ್ಯ ।




ಚಿತ್ರ. 6

1. ಪಿತೃ ಅಥವ ಮಾತೃ ಅರ್ಘ್ಯಪಾತ್ರೆ (ದೊನ್ನೆ)

2. ಪಿತಾಮಹ ಅಥವ ಪಿತಾಮಹಿ ಅರ್ಘ್ಯಪಾತ್ರೆ (ದೊನ್ನೆ)

3. ಪ್ರಪಿತಾಮಹ ಅಥವ ಪ್ರಪಿತಾಮಹಿ ಅರ್ಘ್ಯಪಾತ್ರೆ (ದೊನ್ನೆ)

ಪಿತೃ/ಮಾತೃ ಸ್ಥಾನದ ಬ್ರಾಹ್ಮಣನ ಮುಂದೆ ವಾಯವ್ಯದಿಂದ ಆಗ್ನೇಯಕ್ಕೆ ಮೇಲಿನ ನಕ್ಷೆಯಲ್ಲಿ ತೋರಿಸಿರುವಂತೆ 3 ಕಡೆ ಕೂರ್ಚದಿಂದ ಪ್ರೋಕ್ಷಿಸಿ ಶುದ್ಧಿಮಾಡಿ, ಅಲ್ಲಿ ಮೂರು ಮೂರು ತುಂಡು ದರ್ಭೆಗಳನ್ನು ನೆಲದ ಮೇಲೆ 3 ಕಡೆ (1, 2, 3 ನೇ ಗುರ್ತಿನ ಜಾಗಗಳಲ್ಲಿ) ಉತ್ತರದಿಂದ ದಕ್ಷಿಣಕ್ಕೆ ಕ್ರಮವಾಗಿ ಇಡುವುದು.

ಆ ದರ್ಭೆಗಳ ಮೇಲೆ 3 ದೊನ್ನೆಗಳನ್ನು ಕ್ರಮವಾಗಿ ತಲೆಕೆಳಗಾಗಿ ಹಾಕುವುದು.

**ಉಪರಿ ತ್ರೀಣಿ ತ್ರೀಣಿ ದರ್ಭಾನ್ನಿಕ್ಷಿಪ್ಯ ।**

3 ದೊನ್ನೆಗಳ ಮೇಲೆ ಮೂರು ಮೂರು ದರ್ಭೆಗಳನ್ನು ದಕ್ಷಿಣಾಗ್ರವಾಗಿ ಇಡುವುದು.

**ಪ್ರೋಕ್ಷ್ಯ ।**

ಬೋರಲು ಹಾಕಿದ 3 ದೊನ್ನೆಗಳನ್ನು ಕೂರ್ಚದಿಂದ ಪ್ರೋಕ್ಷಿಸುವುದು.

**ಉದ್ಧೃತ್ಯ - ಉತ್ತಾನಾನಿ ಪ್ರೋಕ್ಷ್ಯ ।**

ಆಮೇಲೆ ಅವುಗಳನ್ನು 'ಸರಿಯಾಗಿ ಇಡುವುದು. ಆಮೇಲೆ ಇನ್ನೊಂದು ಬಾರಿ ಕೂರ್ಚದಿಂದ ಪ್ರೋಕ್ಷಿಸುವುದು.

**ತಿಲಾನ್ವಿಕೀರ್ಯ ।**

ಅವಕ್ಕೆ ಮೇಲಿನ ಕ್ರಮದಲ್ಲಿ (1-2-3) ಸ್ವಲ್ಪ ಸ್ವಲ್ಪ ಎಳ್ಳು ಹಾಕುವುದು.

**ಉದಕಂ ಪೂರಯಿತ್ವಾ ।**

ಅದೇ ಕ್ರಮದಲ್ಲಿ ಪ್ರತಿಯೊಂದು ದೊನ್ನೆಗೂ 2 ದೊಡ್ಡ ಉದ್ಧರಣೆ ಜಗ ಕಲಶೋದಕವನ್ನು ಹಾಕುವುದು.

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥ ಅಸ್ಮತ್ ಪಿತ್ರೇ, (ತಾಯಿ ಶ್ರಾದ್ಧದಲ್ಲಿ 'ಅಸ್ಮನ್ಮಾತ್ರೇ') ತೇ ಜುಷ್ಟಂ ಗೃಹ್ಣಾಮಿ ।

ಈ ಮಂತ್ರದಿಂದ ಎರಡು ಕೈಗಳಿಂದ ಕೂಡಿದ ಬೊಗಸೆಯನ್ನು ಪಿತೃಸ್ಥಾನದ (ತಾಯಿಶ್ರಾದ್ಧದಲ್ಲಿ ಮಾತೃಸ್ಥಾನದ) ಅರ್ಘ್ಯದ ದೊನ್ನೆಗೆ (1ಕ್ಕೆ) ತೋರಿಸುವುದು. (ನಿಮ್ಮ ಸೇವೆ ಮಾಡುತ್ತೇನೆ ಎಂದರ್ಥ).

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥ ಅಸ್ಮತ್ ಪಿತಾಮಹಾಯ (ತಾಯಿ ಶ್ರಾದ್ಧದಲ್ಲಿ 'ಅಸ್ಮಿನ್ ಪಿತಾಮಹ್ಯೈ') ತೇ ಜುಷ್ಟಂ ಗೃಹ್ಣಾಮಿ ॥

ಈ ಮಂತ್ರದಿಂದ ಇದೇ ರೀತಿ ದೊನ್ನೆ (2ಕ್ಕೆ) ತೋರಿಸುವುದು (ಪಿತಾಮಹ ಅಥವಾ ತಾಯಿಶ್ರಾದ್ಧದಲ್ಲಿ ಪಿತಾಮಹಿ ಪಾತ್ರ).

ಶಂ ನೋ ದೇವೀರಭಿಷ್ಟಯ ಆಪೋ ಭವಂತು ಪೀತಯೇ । ಶಂ ಯೋರಭಿಸ್ರವಂತು ನಃ ॥ ಅಸ್ಮತ್ ಪ್ರಪಿತಾಮಹಾಯ (ತಾಯಿ ಶ್ರಾದ್ಧದಲ್ಲಿ ಅಸ್ಮತ್ ಪ್ರಪಿತಾಮಹ್ಯೈ) ತೇ ಜುಷ್ಟಂ ಗೃಹ್ಣಾಮಿ ॥

ಈ ಮಂತ್ರದಿಂದ ದೊನ್ನೆ '3' ಕ್ಕೆ ಬೊಗಸೆ ತೋರಿಸುವುದು. (ಪ್ರಪಿತಾಮಹ ಅಥವ ಪ್ರಪಿತಾಮಹಿ ಅರ್ಘ್ಯಪಾತ್ರ).

ತಿಲೋಽಸಿ ಸೋಮದೇವತ್ಯೋ ಗೋಸವೇ ದೇವನಿರ್ಮಿತಃ । ಪ್ರತ್ನವದ್ಭಿಃ ಪ್ರತ್ನಸ್ಸ್ವಧ ಏಹಿ ॥ ಅಸ್ಮತ್‌ಪಿತರಂ (ಅಸ್ಮನ್ಮಾತರಂ) ........ ಗೋತ್ರಂ ........ (ಗೋತ್ರಾಂ ........) ........ ಶರ್ಮಾಣಂ (ದಾಂ........) ವಸುರೂಪಂ (ವಸುರೂಪಾಂ) ಇಮಾನ್ ಲೋಕಾನ್ ಪ್ರೀಣಯಾನಿಹಿ ಸ್ವಧಾನಮಃ ॥

ಈ ಮಂತ್ರದಿಂದ '1' ನೇ ದೊನ್ನೆಗೆ ಎಳ್ಳು ಹಾಕುವುದು (ತರ್ಪಣ ಬಿಡುವ ರೀತಿಯಲ್ಲಿ).

ತಿಲೋಽಸಿ ಸೋಮದೇವತ್ಯೋ ಗೋಸವೇ ದೇವನಿರ್ಮಿತಃ । ಪ್ರತ್ನವದ್ಭಿಃ ಪ್ರತ್ನಸ್ಸ್ವಧ ಏಹಿ ॥

ಅಸ್ಮತ್ ಪಿತಾಮಹಂ (ಅಸ್ಮತ್ ಪಿತಾಮಹೀಂ) ........ ಗೋತ್ರಂ (ಗೋತ್ರಾಂ) ......... ಶರ್ಮಾಣಂ (.......ದಾ) ರುದ್ರರೂಪಂ (ರುದ್ರರೂಪಾಂ) ಇಮಾನ್ ಲೋಕಾನ್ ಪ್ರೀಣಯಾನಿಹ ಸ್ವಧಾನಮಃ ॥

ಈ ಮಂತ್ರದಿಂದ '2' ನೇ ದೊನ್ನೆಗೆ ಎಳ್ಳು ಹಾಕುವುದು. (ತರ್ಪಣ ಬಿಡುವಂತೆ)

ತಿಲೋಽಸಿ ಸೋಮದೇವತ್ಯೋ ಗೋಸವೇ ದೇವನಿರ್ಮಿತಃ । ಪ್ರತ್ನವದ್ಭಿಃ ಪ್ರತ್ನಸ್ಸ್ವಧ ಏಹಿ ॥

ಅಸ್ಮತ್ ಪ್ರಪಿತಾಮಹಂ (ಅಸ್ಮತ್ ಪ್ರಪಿತಾಮಹೀಂ) ....... ಗೋತ್ರಂ (ಗೋತ್ರಾಂ) .......... ಶರ್ಮಾಣಂ (.......ದಾಂ) ಆದಿತ್ಯರೂಪಂ (ಆದಿತ್ಯರೂಪಾಂ) ಇಮಾನ್ ಲೋಕಾನ್ ಪ್ರೀಣಯಾನಿಹ ಸ್ವಧಾನಮಃ ।

ಈ ಮಂತ್ರದಿಂದ '3' ನೇ ದೊನ್ನೆಗೆ ಎಳ್ಳು ಹಾಕುವುದು. (ತರ್ಪಣ ಬಿಡುವಂತೆ)

ಅರ್ಘ್ಯಪಾತ್ರೇಷು ಅಯಮಯಂ ಗಂಧಃ ।

ಉದ್ಧರಣೆಯಲ್ಲಿ ಕಲಶದ ನೀರು ತುಂಬಿಕೊಂಡು ಸ್ವಲ್ಪ ತೇದ ಗಂಧವನ್ನು ಕದರಿ - 3 ದೊನ್ನೆಗಳಿಗೂ ಹಾಕುವುದು.

ಇಮಾನಿ ವಃ ಶ್ರೀ ತುಲಸೀ ಭೃಂಗರಾಜ ಯೂಥಿಕಾಕುಸುಮ ಕುಶಾಗ್ರಾಣಿ ಚ ಸ್ವಧಾ ನಮಮ । ಪಿತೃ (ಮಾತೃ) ಪಾತ್ರಂ ಸಂಪನ್ನಮ್ । ಪಿತಾಮಹ (ಪಿತಾಮಹೀ) ಪಾತ್ರಂ ಸಂಪನ್ನಮ್ । ಪ್ರಪಿತಾಮಹ (ಪ್ರಪಿತಾಮಹೀ) ಪಾತ್ರಂ ಸಂಪನ್ನಮ್ ॥

3 ದೊನ್ನೆಗಳಿಗೂ ಕ್ರಮವಾಗಿ - ದರ್ಭೆಚೂರು, ತುಳಸಿ, ಬಿಡಿಹೂವು, ಗರಗದ ಸೊಪ್ಪು, ಮುಂತಾದುವುಗಳನ್ನು ಹಾಕುವುದು.

'1' '2' '3' ಈ ದೊನ್ನೆಗಳ ನೀರನ್ನು 3 ತುಂಡು ದರ್ಭೆಗಳಿಂದ ಕಲಸುವುದು.

ಸುಸಂಪನ್ನಮ್ ।

ಬ್ರಾಹ್ಮಣನು 'ಚೆನ್ನಾಗಿ ಕಲಸಿದೆ' ಎನ್ನಬೇಕು.

ಪಾತ್ರೇಷು ಸಂಪಾದಿತ ಸ್ವಧಾರ್ಘ್ಯಾಃ ಸ್ವಧಾರ್ಘ್ಯಾಃ ಸ್ವಧಾರ್ಘ್ಯಾಃ ।

'3 ದೊನ್ನೆಗಳಲ್ಲೂ ಸ್ವಧಾಕಾರಕ್ಕೆ ಅರ್ಘ್ಯ ಉದಕವನ್ನು ಸಂಪಾದಿಸಿಕೊಂಡಿರುವೆನು' ಎನ್ನಬೇಕು.

ಸಂತ್ವರ್ಘ್ಯಾಃ ।

ಅದಕ್ಕೆ ಬ್ರಾಹ್ಮಣನು 'ಸರಿಯಾಗಿದೆ' ಎನ್ನಬೇಕು.

ಹಸ್ತೋದಕಂ ದತ್ವಾ ।

ಪಿತೃಸ್ಥಾನದ ಬ್ರಾಹ್ಮಣನಿಗೆ 'ಕೂರ್ಚ'ದಿಂದ ಹಸ್ತೋದಕ ಕೊಡಬೇಕು.

ಅಸ್ಮತ್ ಪಿತುಃ (ಅಸ್ಮನ್ಮಾತುಃ) ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧೇ ಅಸ್ಮತ್ ಪಿತೃ, ಪಿತಾಮಹ, ಪ್ರಪಿತಾಮಹಾನ್ ....... ಗೋತ್ರಾನ್ ....... ಶರ್ಮಣಃ ವಸು, ರುದ್ರ, ಆದಿತ್ಯರೂಪಾನ್ (ಅಸ್ಮನ್ಮಾತೃ, ಪಿತಾಮಹಿ, ಪ್ರಪಿತಾಮಹೀಃ) (....... ಗೋತ್ರಾಃ ವಸು, ರುದ್ರ, ಆದಿತ್ಯರೂಪಾಃ.........ದಾಃ) ಭವತ್ಸು ಆವಾಹಯಿಷ್ಯೇ ।

ಕರ್ತೃವು 'ಈ ಮಂತ್ರದಿಂದ ಪಿತೃಗಳನ್ನು ನಿಮ್ಮಲ್ಲಿ ಆವಾಹಿಸುತ್ತೇನೆ' ಎನ್ನಬೇಕು.

ಆವಾಹಯ ।

ಪಿತೃಸ್ಥಾನದ ಬ್ರಾಹ್ಮಣನು 'ಹಾಗೆ ಆವಾಹಿಸು' ಎನ್ನಬೇಕು.

ಉಶಂತಸ್ತ್ವಾ ಹವಾಮಹ ಉಶಂತಃ ಸಮಿಧೀ ಮಹಿ । ಉಶಂನ್ನು ಶತ ಆವಹ ಪಿತೄನ್ ಹವಿಷೇ ಅತ್ತವೇ । ಆಯಂತು ನಃ ಪಿತರಃ ಸೋಮ್ಯಾಸೋಽಗ್ನಿಷ್ವಾತ್ತಾಃ ಪಥಿಭಿರ್ದೇವಯಾನೈಃ । ಅಸ್ಮಿನ್ ಯಜ್ಞೇ ಸ್ವಧಯಾಮದಂತ್ವಧಿ ಬ್ರುವಂತು ತೇ ಅವಂತ್ವಸ್ಮಾನ್ ॥

ಈ ಮಂತ್ರಗಳಿಂದ ಪಿತೃಗಳನ್ನು ಆವಾಹಿಸಬೇಕು. ಅಂದರೆ, ಪಿತೃಸ್ಥಾನದ ಬ್ರಾಹ್ಮಣನ ಶಿರಸ್ಸಿನ ಮೇಲೆ 3 ತುಂಡು ದರ್ಭೆಗಳನ್ನಿಟ್ಟು, ಎಳ್ಳಿನಿಂದ, ಶಿರಸ್ಸು ಮೊದಲುಗೊಂಡು ಪಾದಪರ್ಯಂತ ಎಡಭಾಗಕ್ಕೆ ಪೂಜಿಸಬೇಕು.

ಪಿತೃ ಪಿತಾಮಹ ಪ್ರಪಿತಾಮಹಾಃ (ಮಾತೃ ಪಿತಾಮಹಿ ಪ್ರಪಿತಾಮಹ್ಯಃ) ಸಾವಧಾನಾ ಭವಂತು ತೇ ।

ಸಾವಧಾನದಿಂದ ಉಪಚಾರ ಸ್ವೀಕರಿಸಿ ಎನ್ನಬೇಕು.

ಸಾವಧಾನೋಽಸ್ಮಿ ।

ಪಿತೃಸ್ಥಾನದ ಬ್ರಾಹ್ಮಣನು 'ಆಗಲಿ' ಎನ್ನಬೇಕು.

ಹಸ್ತೋದಕಂ ದತ್ವಾ ।

ಪಿತೃಸ್ಥಾನದ ಬ್ರಾಹ್ಮಣನಿಗೆ 'ಕೂರ್ಚ'ದಿಂದ ಒಂದು ಸಲ ಹಸ್ತೋದಕ ಕೊಡಬೇಕು.

ಯಾ ದಿವ್ಯಾ ಆಪಃ ಪಯಸಾ ಸಂಬಭೂವುಃ । ಯಾ ಅಂತರಿಕ್ಷ ಉತ ಪಾರ್ಥಿವೀರ್ಯಾಃ । ಹಿರಣ್ಯವರ್ಣಾ ಯಜ್ಞಿಯಾಸ್ತಾನ ಆಪಶ್ಶಗ್ಂ ಸ್ಯೋನಾ ಭವಂತು ॥

ಅಸ್ಮತ್ ಪಿತಃ (ಅಸ್ಮನ್ಮಾತಃ) ....... ಗೋತ್ರ (....... ಗೋತ್ರೇ) ......

ಶರ್ಮನ್ (ದಾಯೀ) ....... ವಸುರೂಪ ......... (ವಸುರೂಪೀ) ಸ್ವಧೈನ ಇದಂ

ತೇ ಅರ್ಘ್ಯಮ್ ॥

ಪಿತೃಸ್ಥಾನದ ಬ್ರಾಹ್ಮಣನ ಬಲಗೈ ಅಂಗೈಮೇಲೆ '1', '2', '3', ಪಿತೃಪಾತ್ರೆಗಳ ಮೇಲ್ಭಾಗಗಳಲ್ಲಿ ಇರಿಸಿರುವ ದರ್ಭೆಗಳನ್ನು ಒಟ್ಟಿಗೆ ಸೇರಿಸಿ ಇಟ್ಟು -

ಆ ಅಂಗೈಮೇಲೆ ತನ್ನ ಬಲಗೈಯ್ಯನ್ನು ಅಂಗೈ ಮೇಲಾಗಿ ಇಟ್ಟುಕೊಂಡು, ತನ್ನ ಅಂಗೈನಲ್ಲಿ ಅದೇ '1', '2', '3', ಪಿತೃಪಾತ್ರೆಗಳ ಕೆಳಭಾಗಗಳಲ್ಲಿರುವ ದರ್ಭೆಗಳನ್ನು ಇರಿಸಿಕೊಂಡು -

ಪಿತೃಪಾತ್ರೆ (ಮಾತೃಪಾತ್ರೆ) ದೊನ್ನೆಯನ್ನು ('1' ನೇ ದೊನ್ನೆಯನ್ನು) ಎಡಗೈನಲ್ಲಿ ತೆಗೆದುಕೊಂಡು, ಆ ನೀರನ್ನು ತನ್ನ ಅಂಗೈಗೆ ಹಾಕಿಕೊಂಡು, ಈ ಮಂತ್ರವನ್ನು (ಯಾ ದಿವ್ಯಾ ...... ಭವಂತು) ಹೇಳುತ್ತಾ ಬ್ರಾಹ್ಮಣನ ಕೈಗೆ (ತರ್ಪಣಕೊಡುವ ರೀತಿಯಲ್ಲಿ) ಜನಿವಾರ ಬಲಕ್ಕೆ ಹಾಕಿಕೊಂಡು ಅರ್ಘ್ಯವನ್ನು ಕೊಡಬೇಕು. "ಈ ರೀತಿ ಅರ್ಘ್ಯಕೊಟ್ಟಿದ್ದೇನೆ" ಎನ್ನಬೇಕು.

ಅಸ್ತ್ವರ್ಘ್ಯಮ್ ।

ಅದಕ್ಕೆ ಪಿತೃಸ್ಥಾನದ ಬ್ರಾಹ್ಮಣನು "ಅರ್ಘ್ಯಸಂದಿತು" ಎನ್ನಬೇಕು.

ತತಶ್ಶುದ್ಧೋದಕಮ್ ।

ಆ ಮೇಲೆ ಎಡಗೈನಿಂದ ಕಳಶದ ನೀರಿನಲ್ಲಿ 'ಕೂರ್ಚ'ವನ್ನು ಅದ್ದಿಕೊಂಡು ಆ ನೀರಿನಿಂದ ತನ್ನ ಮತ್ತು ಬ್ರಾಹ್ಮಣನ ಬಲಗೈಗಳನ್ನು ಪ್ರೋಕ್ಷಿಸಿಕೊಳ್ಳುವುದು.

ಇಬ್ಬರ ಕೈಗಳೂ, ಮುಂದೆ ಕೊಡುವ ಎರಡು ಅರ್ಘ್ಯಗಳು ಕೊಟ್ಟು, ಪೂರೈಸುವವರೆವಿಗೂ, ಒಬ್ಬರ ಕೈಮೇಲೆ ಇನ್ನೊಬ್ಬರ ಹಸ್ತವು ದರ್ಭೆಗಳ ಸಮೇತ ಹಾಗೆಯೇ ಇರಬೇಕು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳಬೇಕು.

ಯಾ ದಿವ್ಯಾ ಆಪಃ ಪಯಸಾ ಸಂಬಭೂವುಃ । ಯಾ ಅಂತರಿಕ್ಷ ಉತ ಪಾರ್ಥಿವೀರ್ಯಾಃ । ಹಿರಣ್ಯವರ್ಣಾ ಯಜ್ಞಿಯಾ ಸ್ತಾನ ಆಪಶ್ಶಗ್ಂ ಸ್ಯೋನಾ ಭವಂತು ॥

ಅಸ್ಮತ್ ಪಿತಾಮಹ (ಅಸ್ಮತ್ ಪಿತಾಮಹೀ) ....... ಗೋತ್ರ (........ ಗೋತ್ರೇ) ...... ಶರ್ಮನ್ (....... ದಾಯೀ) ರುದ್ರರೂಪ (ರುದ್ರರೂಪೇ) ಸ್ವಧೈನ ಇದಂ ತೇ ಅರ್ಘ್ಯಂ ॥

ಪುನಃ ಹಿಂದಿನ ಕ್ರಮದಂತೆ, ಪಿತಾಮಹ (ಪಿತಾಮಹಿ) ಪಾತ್ರೆ '2' ನೇ ದೊನ್ನೆಯಿಂದ

ಅರ್ಘ್ಯೋದಕವನ್ನು ಹಾಕಿಕೊಂಡು ಅದರಿಂದ ಪಿತೃಸ್ಥಾನದ ಬ್ರಾಹ್ಮಣನ ಹಸ್ತಕ್ಕೆ ಈ ಮಂತ್ರದಿಂದ ಜನಿವಾರವನ್ನು ಬಲಕ್ಕೆ ಮಾಡಿಕೊಂಡು ಅರ್ಘ್ಯಕೊಡುವುದು.

'ಈ ರೀತಿ ಅರ್ಘ್ಯ ಕೊಟ್ಟಿದ್ದೇನೆ' ಎನ್ನುವುದು.

ಅಸ್ತ್ವರ್ಘ್ಯಂ ।

ಬ್ರಾಹ್ಮಣನು 'ಅರ್ಘ್ಯ ಸಂದಿತು' ಎನ್ನಬೇಕು.

ತತಃ ಶುದ್ಧೋದಕಂ ।

ಆಮೇಲೆ ಕಲಶದ ನೀರನ್ನು ಕೂರ್ಚದಲ್ಲಿ ತೆಗೆದುಕೊಂಡು, ಆ ಕೂರ್ಚದ ನೀರಿನಿಂದ ಇಬ್ಬರ ಬಲಗೈಗಳನ್ನೂ ಪ್ರೋಕ್ಷಿಸಿಕೊಳ್ಳುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

**ಯಾ ದಿವ್ಯಾ ಆಪಃ ಪಯಸಾ ಸಂಬಭೂವುಃ । ಯಾ ಅಂತರಿಕ್ಷ ಉತ ಪಾರ್ಥಿವೀರ್ಯಾಃ । ಹಿರಣ್ಯವರ್ಣಾ ಯಜ್ಞಿಯಾಸ್ತಾನ ಆಪಶ್ಶಗ್ಂ ಸ್ಯೋನಾ ಭವಂತು ॥**

ಅಸ್ಮತ್ ಪ್ರಪಿತಾಮಹ (ಅಸ್ಮತ್ ಪ್ರಪಿತಾಮಹೀ) ........ ಗೋತ್ರ (ಗೋತ್ರೇ) ........ ಶರ್ಮನ್ (...... ದಾಯೀ) ಆದಿತ್ಯರೂಪ (ಆದಿತ್ಯರೂಪೇ) । ಸ್ವಧೇನ ಇದಂ ತೇ ಅರ್ಘ್ಯಂ ॥

ಇದೇ ಕ್ರಮದಂತೆ ಪುನಃ ಪ್ರಪಿತಾಮಹ (ಪ್ರಪಿತಾಮಹಿ) ಪಾತ್ರೆಯಿಂದ '3'ನೇ ದೊನ್ನೆಯಿಂದ ಅರ್ಘ್ಯೋದಕವನ್ನು ತೆಗೆದುಕೊಂಡು ತನ್ನ ಕೈಗೆ ಹಾಕಿಕೊಂಡು ಬ್ರಾಹ್ಮಣ ಹಸ್ತಕ್ಕೆ ಈ ಮಂತ್ರದಿಂದ ಜನಿವಾರ ಬಲಕ್ಕೆ ಮಾಡಿಕೊಂಡು ಅರ್ಘ್ಯಕೊಡುವುದು. ಮತ್ತು 'ಈ ರೀತಿ ಅರ್ಘ್ಯ ಕೊಟ್ಟಿದೇನೆ' ಎನ್ನಬೇಕು.

ಅಸ್ತ್ವರ್ಘ್ಯಂ ।

ಅದಕ್ಕೆ ಪಿತೃಸ್ಥಾನದ ಬ್ರಾಹ್ಮಣನು 'ಅರ್ಘ್ಯ ಸಂದಿತು' ಎನ್ನಬೇಕು.

ತತಶ್ಶುದ್ಧೋದಕಂ ।

ಆಮೇಲೆ ಕೂರ್ಚದ ನೀರಿನಿಂದ ಇಬ್ಬರ ಬಲಗೈಗಳನ್ನೂ ಪ್ರೋಕ್ಷಿಸಿಕೊಳ್ಳುವುದು.

ಪ್ರಾಚೀನಾವೀತಿ ।

ಆಮೇಲೆ ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಪ್ರಪಿತಾಮಹ ಪಿತಾಮಹ ಪಿತೃಭ್ಯಃ (ಪ್ರಪಿತಾಮಹಿ ಪಿತಾಮಹಿ ಮಾತೃಭ್ಯಃ) । ಪಾತ್ರಾಣಿ ಸ್ಥಾನಾನಿ ಸ್ಥ ಸ್ವಸ್ಥಾನಂ ಅಸಿ ॥

ಶ್ರಾದ್ಧಕರ್ತೃವು ತನ್ನಲ್ಲಿನ ಕೂರ್ಚದಿಂದ ಬ್ರಾಹ್ಮಣನ ಎಡಃಪಕ್ಕದಲ್ಲಿ ನೆಲದ ಮೇಲೆ

ನೀರನ್ನು ಪ್ರೋಕ್ಷಿಸಿ ತನ್ನ ಕೈಯಲ್ಲಿರುವ ದರ್ಭೆಗಳನ್ನಿಟ್ಟು ನಂತರ ಪ್ರಪಿತಾಮಹನ ದೊನ್ನೆ (ಪ್ರಪಿತಾಮಹಿಯ ದೊನ್ನೆ) '3' ನೇ ದೊನ್ನೆಯನ್ನು ಪಿತಾಮಹನ ದೊನ್ನೆ (ಪಿತಾಮಹಿಯ ದೊನ್ನೆ) ಅಂದರೆ '2' ನೇ ದೊನ್ನೆಯಲ್ಲೂ, ಹೀಗಾದ ಮೇಲೆ '2' ನೇ ದೊನ್ನೆಯನ್ನು ಪಿತೃವಿನ ದೊನ್ನೆ (ಮಾತೃವಿನ ದೊನ್ನೆ) ಅಂದರೆ, '1' ದೊನ್ನೆಯಲ್ಲಿ ಇಟ್ಟು, ಹೀಗಾದ ಮೇಲೆ '1' ನೇ ದೊನ್ನೆಯನ್ನು ಪಿತೃ (ಮಾತೃ) ಸ್ಥಾನದ ಬ್ರಾಹ್ಮಣನ ಎಡಪಕ್ಕದಲ್ಲಿಡುವುದು. ಆ ಬ್ರಾಹ್ಮಣನ ಕೈಯಲ್ಲಿದ್ದ ದರ್ಭೆಗಳನ್ನು ಆ ದೊನ್ನೆಯ ಮೇಲೂ, ತನ್ನ ಕೈಯಲ್ಲಿದ್ದ ದರ್ಭೆಗಳನ್ನು ಆ ದೊನ್ನೆಯ ಕೆಳಗೂ ಇಡುವುದು.

ತತಶ್ಶುದ್ಧೋದಕಂ ।

ಪಿತೃಸ್ಥಾನದ ಬ್ರಾಹ್ಮಣನಿಗೆ 'ಕೂರ್ಚ'ದಿಂದ ಒಂದು ಸಲ ಹಸ್ತೋದಕವನ್ನು ಕೊಡುವುದು.

ಉಪವೀತಿ ।

ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳುವುದು.

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಮ್ ॥

ಅಸ್ಮತ್ ಪಿತೃ-ಪಿತಾಮಹ-ಪ್ರಪಿತಾಮಹಾಃ (ಅಸ್ಮತ್ ಮಾತೃ, ಪಿತಾಮಹಿ, ಪ್ರಪಿತಾಮಹ್ಯಃ) ಸರ್ವೇನ ಯಥಾಭಾಗಶಃ ಅನುಲೇಪನಾರ್ಥೇ ಅಮೀ ವೋ ಗಂಧಾಃ ।

ಈ ಮಂತ್ರದಿಂದ ಪಿತೃಸ್ಥಾನದ ಬ್ರಾಹ್ಮಣನಿಗೆ ದೊನ್ನೆಯಲ್ಲಿನ ಗಂಧದಲ್ಲಿ ಸ್ವಲ್ಪವನ್ನು ಒಂದು ಬಾಳೆ ಎಲೆಯ ಸಣ್ಣ ಚೂರಿಗೆ ಹಾಕಿ ಅದನ್ನು ಕೊಡುವುದು.

(ಗಂಧವನ್ನು ಕೊಡುವಾಗ ಪವಿತ್ರವನ್ನು ಅಂಗೈ ಒಳಗೆ ತಿರುಗಿಸಿಕೊಂಡಿದ್ದು ಕೊಟ್ಟು ಆದಮೇಲೆ ಪುನಃ ಮೊದಲಿನಂತೆ ಬೆರಳಿಗೆ ಧರಿಸುವುದು) ಹೀಗೆ 'ಗಂಧವನ್ನು ಕೊಟ್ಟಿರುತ್ತೇನೆ' ಎನ್ನಬೇಕು.

ಸುಗಂಧಾಃ ।

ಬ್ರಾಹ್ಮಣನು 'ಗಂಧ ಚೆನ್ನಾಗಿದೆ' ಎನ್ನಬೇಕು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಆಯನೇತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ॥ ಅಲಂಕರಣಾರ್ಥೇ ಇಮೇ ತಿಲಾಃ ॥

ಈ ಮಂತ್ರದಿಂದ ಎಳ್ಳನ್ನು ಬ್ರಾಹ್ಮಣನ ತಲೆಯಮೇಲೆ ಪೂಜೆಮಾಡುವುದು.

ಸುತಿಲಾಃ ।

ಬ್ರಾಹ್ಮಣನು 'ಒಳ್ಳೆಯ ತಿಲ ದೊರೆಯಿತು' ಎನ್ನಬೇಕು.

ಮಾಲ್ಯಾರ್ಥೇ ಇಮಾನಿ ಶ್ರೀ ತುಲಸೀ ದಳಾನಿ ।

ಧೂರಸಿ ಧೂರ್ವ್ತ ಧೂರ್ವಂತಂ ಧೂರ್ವ್ತತಂ ಯೋಽಸ್ಮಾನ್ ಧೂರ್ವತಿತಂ ಧೂರ್ವ್ತಯಂ ವಯಂ ಧೂರ್ವಾಮಃ ॥

ಉದಕೇನೈವ ಸಾಂಕಲ್ಪಿತೋ ವೋ ಧೂಪಃ ।

ಈ ಮಂತ್ರದಿಂದ ಧೂಪಕ್ಕೆ ಬದಲಾಗಿ ಕೂರ್ಚದಿಂದ ಒಂದು ಸಲ ಬ್ರಾಹ್ಮಣನಿಗೆ ಹಸ್ತೋದಕ ಕೊಡುವುದು.

ನೀರಿನಿಂದಲೇ 'ಧೂಪವನ್ನು ಸಂಕಲ್ಪಿಸಿ ಕೊಟ್ಟಿರುವೆನು' ಎನ್ನಬೇಕು.

ಸುಧೂಪಃ ।

ಅದಕ್ಕೆ ಬ್ರಾಹ್ಮಣನು 'ಒಳ್ಳೆ ಧೂಪ ದೊರೆಯಿತು' ಎನ್ನಬೇಕು.

ಉದ್ದೀಪ್ಯಸ್ವ ಜಾತವೇದೋಽಪಘ್ನಂ ನಿರ್ಋತಿಂ ಮಮ । ಪಶೂಗ್‌ಂಶ್ಚ ಮಹ್ಯಮಾವಹ ಜೀವನಂ ಚ ದಿಶೋ ದಿಶ ॥

ಜ್ವಾಲಾಲಾಭೇನ ಸೂರ್ಯಸ್ಥಿತಂ ವೋ ಜ್ಯೋತಿಃ ।

ಈ ಮಂತ್ರದಿಂದ ಜ್ಯೋತಿಗೆ ಬದಲಾಗಿ ಬ್ರಾಹ್ಮಣನಿಗೆ ಒಂದು ಸಲ ಹಸ್ತೋದಕ ಕೊಡುವುದು.

ಸುಜ್ಯೋತಿಃ ।

ಬ್ರಾಹ್ಮಣನು 'ಒಳ್ಳೆಯ ಜ್ಯೋತಿ' ಎನ್ನಬೇಕು.

ಯುವಾ ಸುವಾಸಾಃ ಪರಿವೀತ ಆಗಾತ್ಸ ಉಶ್ರೇಯಾನ್ಭವತಿ ಜಾಯಮಾನಃ । ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧಿಯೋ ಮನಸಾ ದೇವಯಂತಃ ॥

ಆಚ್ಛಾದನಾರ್ಥಂ (ವಸ್ತ್ರಮಾಚ್ಛಾದನಂ) ತದಭಾವೇ ದರ್ಭಮಾಚ್ಛಾದನಂ ।

ಉಡಲು, ಹೊದೆಯಲು ಬಟ್ಟೆಗಳನ್ನು ಕೊಡುವುದಿದ್ದರೆ : "ಅಂತಃ ಪ್ರಾವರಣಾರ್ಥಂ - ಬಹಿಃಪ್ರಾವರಣಾರ್ಥಂ - ವಸ್ತ್ರಯುಗ್ಮಂ ಸ್ವಧಾ - ನಮಮ - ನಮಮ" ಎಂದು ಹೇಳಬೇಕು. ಇಲ್ಲದಿದ್ದರೆ ವಸ್ತ್ರಕ್ಕೆ ಬದಲಾಗಿ 3 ತುಂಡು ದರ್ಭೆಗಳನ್ನು ಕೊಡುವುದು.

ಅಸ್ತ್ವಾಚ್ಛಾದನಂ ।

ಬ್ರಾಹ್ಮಣ 'ತನಗೆ ವಸ್ತ್ರ ಲಭಿಸಿತು' ಎನ್ನಬೇಕು.

**ಪವಿತ್ರಾರ್ಥಾ ಇಮೇ ಕುಶಾಃ ।**

ಪಿತೃಸ್ಥಾನದ ಬ್ರಾಹ್ಮಣನಿಗೆ ಪವಿತ್ರಾರ್ಥವಾಗಿ ತಂದೆಯಿದ್ದಲ್ಲಿ 4 ದರ್ಭೆಗಳನ್ನೂ ಇಲ್ಲದಿದ್ದಲ್ಲಿ 3 ಉದ್ದವಾದ ದರ್ಭೆಗಳನ್ನೂ ಕೊಡುವುದು.

**ಸುಕುಶಾಃ ।**

ಆ ಬ್ರಾಹ್ಮಣನು 'ಒಳ್ಳೆಯ ಕುಶ ದೊರೆಯಿತು' ಎನ್ನಬೇಕು.

ಪಿತೃಸ್ಥಾನದ ಬ್ರಾಹ್ಮಣನು ಆ 3 ದರ್ಭೆಗಳಿಂದ ಪವಿತ್ರ ಕಟ್ಟಿಕೊಂಡು - ಆಪೋಶನಾದಿಗಳನ್ನು ಸ್ವೀಕರಿಸುವಲ್ಲೂ ಹಾಕಿಕೊಳ್ಳಬೇಕು. ಊಟಮಾಡುವಾಗ, ಎಲೆಯ ಒಂದು ಕಡೆ ಇಟ್ಟುಕೊಂಡಿದ್ದು, ಉತ್ತರಾಪೋಶನದ ವೇಳೆಯಲ್ಲಿ ಪುನಃ ಹಾಕಿಕೊಂಡು ಅನಂತರ, ಬಲಗೈನಿಂದಲೇ ಆ ಪವಿತ್ರವನ್ನು ಬಿಚ್ಚಿ ಊಟದ ಎಲೆಯಲ್ಲಿ ಒಂದು ಪಕ್ಕದಲ್ಲಿ ಇಡಬೇಕು.

ಅರ್ಚನವಿಧೇಸ್ಸಂಪೂರ್ಣಾತಾಸ್ತು ।

ಅರ್ಚನ ವಿಧಿಯು ಸಂಪೂರ್ಣವಾಯಿತಲ್ಲವೇ ?

ಅಸ್ತು ।

'ಸಂಪೂರ್ಣವಾಯಿತು' ಎಂದು ಬ್ರಾಹ್ಮಣನು ಹೇಳಬೇಕು.

ಸಂಕಲ್ಪ ಸಿದ್ಧಿರಸ್ತ್ವಿತಿ ಭವಂತೋ ಬ್ರುವಂತು ।

''ನನ್ನ ಸಂಕಲ್ಪ ಸಿದ್ಧಿಸಿತಲ್ಲವೆ ? ಹೇಳಿ ?'' ಎಂದು ಕರ್ತೃವು ಕೇಳಬೇಕು.

ಅಸ್ತು ಸಂಕಲ್ಪ ಸಿದ್ಧಿಃ ।

'ನಿಮ್ಮ ಸಂಕಲ್ಪ ಸಿದ್ಧಿಸಿತು' ಎಂದು ಆ ಪಿತೃಸ್ಥಾನದ ಬ್ರಾಹ್ಮಣ ಹೇಳಬೇಕು.

**ಯುಷ್ಮದನುಜ್ಞಯಾ ಸರ್ವತ್ರ ಮಂಡಲೋದ್ವರ್ತನಂ, ಪಾತ್ರಾಸಾದನಂ ಚ ಕರಿಷ್ಯೇ ।**

ವಿಶ್ವೇದೇವರ ಮತ್ತು ಪಿತೃಸ್ಥಾನದ ಬ್ರಾಹ್ಮಣರನ್ನು ಕುರಿತು :- ''ನಿಮ್ಮ ಅಪ್ಪಣೆಯಾದರೆ ಇನ್ನು ನಿಮ್ಮ ಭೋಜನಕ್ಕೆ ಮಂಡಲಾದಿಗಳನ್ನು ಮಾಡಿ ಎಲೆ ಹಾಕುತ್ತೇನೆ'' ಎಂದು ಕೇಳಬೇಕು.

**ಕುರುಷ್ವ ।**

ಅವರು 'ಹಾಗೆಮಾಡು' ಎನ್ನಬೇಕು.

**ಭೋಜನ ಸ್ಥಾನೇಷು, ವಾರಿಣಾ, ಸವ್ಯೇನ, ವಿಶ್ವೇದೇವ ವಿಪ್ರಸ್ಯ ಪುರತಃ ಚತುರಶ್ರ ಮಂಡಲಂ, ಪ್ರಾಚೀನಾವೀತಿನಾ ಪಿತೃ ವಿಪ್ರಸ್ಯ ಪುರತಃ, ವರ್ತುಲಂ ಮಂಡಲಂ, ಸವ್ಯೇನ ಸುವಾಸಿನ್ಯಾಃ ಪುರತಃ, ಚತುರಶ್ರ ಮಂಡಲಂ, ದೇವಸ್ಯ ಪುರತಃ ಚತುರಶ್ರ ಮಂಡಲಂ ಚ ಕೃತ್ವಾ ॥**

**ಭೋಜನ ಪಾತ್ರಾಣ್ಯಾಸ್ತೀರ್ಯ । ಪ್ರಕ್ಷಾಳ್ಯ, ಹಸ್ತೇನ ನಿಮೃಜ್ಯ । ಆಜ್ಯಾದಿ ಧಾರಣಾರ್ಥಂ, ಕ್ಷುದ್ರಪಾತ್ರಾಣಿ, ಪಾತ್ರಾಂತರೇ ಭೂಮೌ ವಾ ನಿಕ್ಷಿಪೇತ್ ॥ ಏಕಾ**

ಸುವಾಸಿನೀಂ ಸುವಾಸಿನೀ ಶ್ರಾದ್ಧೇ, ಹರಿದ್ರಾಕುಂಕುಮ ಗಂಧ ಪುಷ್ಪ ವಸ್ತ್ರಾದಿಭಿಸ್ಸಂಪೂಜ್ಯ, ಬ್ರಾಹ್ಮಣೈಸ್ಸಹೋಪವೇಶ್ಯ ॥

ಜನಿವಾರ ಬಲಕ್ಕೆ ಹಾಕಿಕೊಂಡು - ವಿಶ್ವೇದೇವರ ಸ್ಥಾನಕ್ಕೆ ಚತುರಶ್ರಮಂಡಲ - ಜನಿವಾರ ಎಡಕ್ಕೆ ಹಾಕಿಕೊಂಡು ಪಿತೃಸ್ಥಾನದಲ್ಲಿ ವರ್ತುಳಾಕಾರ ಮಂಡಲ - ಜನಿವಾರ ಬಲಕ್ಕೆ ಹಾಕಿಕೊಂಡು ದೇವರ (ಮತ್ತು ಸುವಾಸಿನೀ ಶ್ರಾದ್ಧವಾದರೆ, ಸುವಾಸಿನಿಯ) ಸ್ಥಾನದಲ್ಲಿ ಚತುರಶ್ರಮಂಡಲಗಳನ್ನು ನೀರಿನಿಂದ ಮಾಡಬೇಕು. ದೇವರ ಎಲೆ ಬಳಿ ಒಂದು ಮಣೆ ಹಾಕಿ ಆ ಮಣೆ ಮೇಲೆ - ಸಾಲಿಗ್ರಾಮ ಸಂಪುಟವನ್ನಾಗಲಿ ಅಥವಾ ಮನೆದೇವರ ಪಟವನ್ನಾಗಲೀ ಇಡಬೇಕು.

ಮೇಲ್ಕಂಡ ಮಂಡಲಗಳ ಮೇಲೆ 3 ಚೋಟುಗಳ ಉದ್ದವಿರುವ ಎರಡೆರಡು ಅಗ್ರದ ಬಾಳೆಲೆಗಳನ್ನು ಹಾಸಬೇಕು. ಬಾಳೆಲೆ ಅಗ್ರಗಳು ಊಟಕ್ಕೆ ಕುಳಿತವರ ಎಡಕ್ಕೆ ಬರುವಂತೆ ಇರಬೇಕು. ತಳದ ಎಲೆಯನ್ನು ಸ್ವಲ್ಪ ಮೇಲಕ್ಕೆ ಎಳೆದು ಅದರಲ್ಲಿ ಮೇಲ್ಭಾಗದಲ್ಲಿ ಪಲ್ಯ, ಗೊಜ್ಜು, ಕೋಸುಂಬರಿ ಮುಂತಾದುವುಗಳನ್ನು ಬಡಿಸಬೇಕು. ಎಲೆಗಳಿಗೆ ನೀರು ಚಿಮುಕಿಸಿ, ಶುಭ್ರವಸ್ತ್ರದಲ್ಲಿ ಒರೆಸಬೇಕು. ಪ್ರತಿ ಎಲೆಗೂ ಬಲಭಾಗದಲ್ಲಿ ಎರಡೆರಡು ದೊನ್ನೆಗಳನ್ನು ಇಡಬೇಕು. ವಿಶ್ವೇದೇವರಿಗೆ, ಸುವಾಸಿನಿಗೆ, ದೇವರಿಗೆ ಪೂರ್ವಾಭಿಮುಖವಾಗಿಯೂ, ಪಿತೃಸ್ಥಾನಕ್ಕೆ ಉತ್ತರಾಭಿಮುಖವಾಗಿಯೂ, ಎಲೆಗಳನ್ನು ಹಾಕಬೇಕು.

ವರಾಹಪುರಾಣ : ಪ್ರಾಙ್ಮುಖಂ ಭೋಜಯೇದ್ವಿಪ್ರಂ ದೇವಾನಾಮುಭಯಾತ್ಮಕಂ ।
ಪಿತೃಪೈತಾಮಹಾನಾಂ ಚ ಭೋಜಯೇಚ್ಚಾಪ್ಯುದಙ್ಮುಖಾನ್ ॥

# ಅಗ್ನೌಕರಣಮ್

ಸವ್ಯೇನ, ಪ್ರಾಣಾನಾಯಮ್ಯ ।

ಜನಿವಾರ ಬಲಗಡೆ ಹಾಕಿಕೊಂಡು ಪ್ರಾಣಾಯಾಮ ಮಾಡುವುದು.

ಓಂ, ಓಂ, ಅದ್ಯ ಮಯಾ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ಪ್ರಾಚೀನಾವೀತಿ ಅಸ್ಮತ್ ಪಿತುಃ (ಅಸ್ಮನ್ಮಾತುಃ) ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧೇ, ಭವದನುಜ್ಞಯಾ ಅಗ್ನೌಕರಣಂ ಕರಿಷ್ಯೇ ।

ಅನಂತರ ಜನಿವಾರವನ್ನು ಎಡಕ್ಕೆ ಹಾಕಿಕೊಂಡು 'ಎಲೈ ಬ್ರಾಹ್ಮಣರಿರಾ ! ನಿಮ್ಮ ಅಪ್ಪಣೆಯಾದರೆ ಅಗ್ನೌಕರಣವನ್ನು ಮಾಡುತ್ತೇನೆ' ಎಂದು ಬ್ರಾಹ್ಮಣರನ್ನು ಕೇಳಬೇಕು.

ಕುರುಷ್ವ ।

ಬ್ರಾಹ್ಮಣರು ಕರ್ತೃವನ್ನು 'ಅಗ್ನೌಕರಣಮಾಡು' ಎಂದು ಹೇಳುವರು.

ಅನ್ನಮಗ್ನಾವಧಿಶ್ರಿತ್ಯ, ಉದಗುದ್ವಾಸ್ಯ, ಅದ್ಭಿಃ ಪ್ರೋಕ್ಷ್ಯ ।

ಮುಕ್ಕಾಲು ದೊಡ್ಡಸೌಟು ಅನ್ನವನ್ನು ಒಂದು ಬಾಳೆಯೆಲೆಯ ಸಹಿತ ತೆಗೆದುಕೊಂಡು ಬಂದು, ಅಗ್ನಿಯ ಹತ್ತಿರ ಉತ್ತರ ಭಾಗದಲ್ಲಿ ಇಟ್ಟುಕೊಳ್ಳುವುದು. ಅದನ್ನು 'ಕೂರ್ಚ'ದಿಂದ ಪ್ರೋಕ್ಷಿಸುವುದು.

*ಅನ್ನಮಭಿಘಾರ್ಯ ।*
ಅದಕ್ಕೆ ಸ್ವಲ್ಪ ತುಪ್ಪವನ್ನು ಅಭಿಘಾರ ಮಾಡುವುದು.

*ಮೇಕ್ಷಣಮಾದಾಯ ।*
ಈ ಅನ್ನವನ್ನು ನಾಲ್ಕು ಭಾಗವಾಗಿ ಮಾಡಲು, 3 ತುಂಡು ದರ್ಭೆಗಳನ್ನು (ಮೇಕ್ಷಣ) ತೆಗೆದುಕೊಳ್ಳುವುದು.

*ಮೇಕ್ಷಣೇನ ಅನ್ನಂ ಚತುರ್ಧಾ ವಿಭಜ್ಯ । ಮೇಕ್ಷಣಂ ಧೃತ್ವಾ ।*
ಈ ಮೇಕ್ಷಣದಿಂದ ಕೆಳಗಿನ ನಕ್ಷೆಯಂತೆ, ಅನ್ನವನ್ನು ನಾಲ್ಕುಭಾಗಗಳಾಗಿ ವಿಂಗಡಿಸುವುದು ಮತ್ತು ಮೇಕ್ಷಣವನ್ನು (3 ತುಂಡು ದರ್ಭೆ) ಪವಿತ್ರದೊಡನೆ ಬೆರಳಲ್ಲಿ ಇಟ್ಟುಕೊಳ್ಳುವುದು.

| ಈ | ಪೂ | ಆ |
|---|---|---|
| | 1 | 4 | |
| ಉ | | ದ |
| | 2 | 3 | |
| ವಾ | ಪ | ನೈ |

ಚಿತ್ರ 7. ಅಗ್ನೌಕರಣಕ್ಕೆ ಅನ್ನ ವಿಭಾಗದ ನಕ್ಷೆ

ನಕ್ಷೆಯಲ್ಲಿ ತೋರಿಸಿರುವ ಅನ್ನದ ನಾಲ್ಕು ಭಾಗಗಳ ವಿನಿಯೋಗದ ವಿವರಣೆ :
ನಕ್ಷೆಯಲ್ಲಿನ '1' ಈ ಅನ್ನವನ್ನು ಅಗ್ನಿಯಲ್ಲಿ ಹೋಮಮಾಡುವುದು.
ನಕ್ಷೆಯಲ್ಲಿನ '2' ಈ ಅನ್ನವನ್ನು ಪಿತೃಸ್ಥಾನದ ಬ್ರಾಹ್ಮಣನ ಎಲೆಗೆ ಬಡಿಸುವುದು.
ನಕ್ಷೆಯಲ್ಲಿನ '3' ಈ ಅನ್ನವನ್ನು ಮೊಸರಿನಲ್ಲಿ ಕಲೆಸಿ ವಿಕಿರಕ್ಕೆ ಉಪಯೋಗಿಸುವುದು.
ನಕ್ಷೆಯಲ್ಲಿನ '4' ಈ ಅನ್ನವನ್ನು ಪಿಂಡಕಟ್ಟುವ ಅನ್ನದ ಜೊತೆಗೆ ಹಾಕಿಕೊಂಡು ಪಿಂಡಕಟ್ಟುವುದು.

*ತೂಷ್ಣೀಂ ಅಪ್ರದಕ್ಷಿಣಂ ಪರಿಸ್ತೀರ್ಯ ।*
ಅಗ್ನಿಯ ನಾಲ್ಕುದಿಕ್ಕುಗಳಲ್ಲಿ ಇರುವ ದರ್ಭೆಗಳಲ್ಲಿ (ಪರಿಸ್ತರಣಗಳಲ್ಲಿ) ಪೂರ್ವ ಪಶ್ಚಿಮ ದಿಕ್ಕುಗಳಲ್ಲಿ ಉತ್ತರಾಗ್ರವಾಗಿರುವ ದರ್ಭೆಗಳನ್ನು ದಕ್ಷಿಣಾಗ್ರವಾಗಿ ತಿರುಗಿಸಿ -

ಅವುಗಳನ್ನು, ಆಯಾಯಾ ಸ್ಥಳಗಳಲ್ಲೇ ಇಡುವುದು (ಇದಕ್ಕೆ ಮಂತ್ರ ಹೇಳಬೇಕಾಗಿಲ್ಲ - ಕೇವಲ ತೂಷ್ಣೀಭಾವದಿಂದ) (ಔಪಾಸನಾಗ್ನಿಯನ್ನು ಈ ರೀತಿ ದಾಕ್ಷಿಣಾಗ್ನಿಯನ್ನಾಗಿ, ಪಿತೃಹೋಮಕ್ಕೋಸ್ಕರ ಮಾರ್ಪಾಟು ಮಾಡಿಕೊಳ್ಳುವುದು).

**ಅಪ್ರದಕ್ಷಿಣಂ ಪರಿಷಿಚ್ಯ ।**

ಯಜ್ಞೇಶ್ವರನಿಗೆ ಅಪ್ರದಕ್ಷಿಣವಾಗಿ ಪರಿಷೇಚನೆ ಮಾಡುವುದು (ಬಲದಿಂದ ಎಡಕ್ಕೆ).

**ಈಶಾನ್ಯಭಾಗಮನ್ನಮಭಿಘಾರ್ಯ ।**

ಈಶಾನ್ಯ ದಿಕ್ಕಿನಲ್ಲಿರುವ '1' ಅನ್ನಕ್ಕೆ ಪುನಃ ಆಜ್ಯಸ್ಥಾಲಿಯ ತುಪ್ಪದಿಂದ ಅಭಿಘಾರ ಮಾಡುವುದು.

(ಅಂದರೆ ಔಪಾಸನ ಕಾಲದಲ್ಲಿ ತುಪ್ಪವನ್ನು ಇಟ್ಟುಕೊಂಡಿದ್ದ ಹಿತ್ತಾಳೆ, ಕಲಾಯಿಯಾದ ಬಟ್ಟಲು ತುಪ್ಪದಿಂದ)

**ಈಶಾನ್ಯ ಭಾಗಮರ್ಧಮನ್ನಂ ಗೃಹೀತ್ವಾ । (ಅಪಸವ್ಯೇನ ಗೃಹೀತ್ವಾ - ಸವ್ಯೇನ ದದ್ಯಾತ್)**

ಈ ಈಶಾನ್ಯ ದಿಕ್ಕಿನ ಅನ್ನದ ಅರ್ಧಭಾಗವನ್ನು ಬಲಗೈಲಿ ತೆಗೆದುಕೊಂಡು ಜನಿವಾರವನ್ನು ಎಡದಲ್ಲಿಯೇ ಹಾಕಿಕೊಂಡು

**ಸೋಮಾಯ ಪಿತೃಪೀತಾಯ ಸ್ವಧಾ । ಸವ್ಯೇನ ನಮಃ ॥**

ಈ ಮಂತ್ರವನ್ನು ಹೇಳಿ, ಜನಿವಾರ ಬಲಕ್ಕೆ ಹಾಕಿಕೊಂಡು ಈ 'ನಮಃ' ಎಂಬುದನ್ನು ಹೇಳಿ, ಅಗ್ನಿಯಲ್ಲಿ ಉತ್ತರದ ಕಡೆ ಹೋಮ ಮಾಡುವುದು.

**ಸೋಮಾಯ ಪಿತೃಪೀತಾಯೇದಂ ನಮಮ । ಪ್ರಾಚೀನಾವೀತಿ ॥**

ಇದು 'ಸೋಮಾದಿ' ಪಿತೃಗಳಿಗೆ ಎಂದು ಹೇಳುವುದು. ಆಮೇಲೆ ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

**ಪುನರಭಿಘಾರ್ಯ ।**

ಪುನಃ ಈಶಾನ್ಯ ಭಾಗದ ಉಳಿದ ಅನ್ನಕ್ಕೆ ತುಪ್ಪದಿಂದ ಅಭಿಘಾರ ಮಾಡುವುದು.

**ಶೇಷಮನ್ನಂ ಗೃಹೀತ್ವಾ ।**

ಈಶಾನ್ಯದಿಕ್ಕಿನ ಈ ಉಳಿದ ಅನ್ನವನ್ನೆಲ್ಲಾ ಬಲಗೈಲಿ ತೆಗೆದುಕೊಂಡು

**ಅಗ್ನಯೇ ಕವ್ಯವಾಹನಾಯ ಸ್ವಧಾ । ಸವ್ಯೇನ ನಮಃ ॥**

ಈ ಮಂತ್ರವನ್ನು ಹೇಳಿ ಜನಿವಾರ ಬಲಕ್ಕೆ ಹಾಕಿಕೊಂಡು ಈ 'ನಮಃ' ಎಂಬುದನ್ನು ಹೇಳಿ ಅಗ್ನಿಯಲ್ಲಿ ದಕ್ಷಿಣದಕಡೆ ಹೋಮ ಮಾಡುವುದು.

**ಅಗ್ನಯೇ ಕವ್ಯವಾಹನಾಯೇದಂ ನಮಮ ।**

ಇದು 'ಅಗ್ನಿ' ಕವ್ಯವಾಹನರಿಗೆ ಎಂದು ಹೇಳುವುದು.

ಪ್ರಾಚೀನಾವೀತಿ ।

ಆಮೇಲೆ ಜನಿವಾರ ಎಡಕ್ಕೆ ಹಾಕಿಕೊಳ್ಳುವದು.

ತೂಷ್ಣೀಂ ಅಗ್ನಿಂ ಅಪ್ರದಕ್ಷಿಣಂ ಉತ್ತರ ಪರಿಷೇಚನಂ ಕೃತ್ವಾ ।

ಅಗ್ನಿಯನ್ನು ಮಂತ್ರವಿಲ್ಲದೆ (ತೂಷ್ಣೀಂ) ಸುಮ್ಮನೆ ಅಪ್ರದಕ್ಷಿಣವಾಗಿ ನೀರಿನಿಂದ ಎರಡನೆಯಸಾರಿ ಉತ್ತರ ಪರಿಷೇಚನಾ ರೂಪದಲ್ಲಿ ಸುತ್ತುಗಟ್ಟುವದು.

ಅಪ ಉಪಸ್ಪೃಶ್ಯ ।

ಅನಂತರ ಕೈ ತೊಳೆದುಕೊಳ್ಳುವುದು.

ಪಿತೃ (ಮಾತೃ) ಸ್ಥಾನೀಯ ಬ್ರಾಹ್ಮಣ ಹಸ್ತೇ ಹಸ್ತೋದಕಂ ದತ್ವಾ ।

ಪಿತೃಸ್ಥಾನದ ಬ್ರಾಹ್ಮಣನಿಗೆ "ಕೂರ್ಚ"ದಿಂದ ಒಂದುಸಲ ಹಸ್ತೋದಕ ಕೊಡುವುದು.

ವಾಯವ್ಯಭಾಗಮನ್ನಮಾದಾಯ - ಅಭಿಘಾರ್ಯ ।

ಬಾಳೆಎಲೆ ಸೀಳಿನ ಮೇಲೆ 4 ಭಾಗ ಮಾಡಿದ ಅನ್ನದಲ್ಲಿ ವಾಯವ್ಯ ಭಾಗದ "2" ಅನ್ನಕ್ಕೆ ಅಭಿಘಾರ ಮಾಡುವುದು.

ಪಾತ್ರಂ, ಪೂರ್ವಪುಟಮಭಿಘಾರ್ಯ ।

ಹಾಗೆಯೇ ಪಿತೃಸ್ಥಾನದ ಬ್ರಾಹ್ಮಣನ ಎಲೆಗೆ (ಪೂರ್ವಪುಟಕ್ಕೆ) ಅಂದರೆ ಅಗ್ರದಲ್ಲಿನ ದಿಂಡಿನ ಕೆಳಭಾಗಕ್ಕೆ ತುಪ್ಪದಿಂದ ಅಭಿಘಾರ ಮಾಡುವುದು.

ಸ್ವಧೇಯಂ । ಸ್ವಧೇಯಂ । ಸ್ವಧೇಯಂ । ಇತಿ ತ್ರೀನ್ ನಿಕ್ಷಿಪ್ಯ ॥

ಈ ವಾಯವ್ಯ ಭಾಗದ ಒಟ್ಟು ಅನ್ನವನ್ನು ಬಲಗೈಲಿ ತೆಗೆದುಕೊಂಡು ಈ ಮಂತ್ರದಿಂದ 3 ಸಾರಿ - ಎಲೆಯ ಪೂರ್ವಪುಟದ ತುಪ್ಪದ ಮೇಲೆ ಬಡಿಸುವುದು (ತರ್ಪಣ ಕೊಡುವ ರೀತಿಯಲ್ಲಿ).

ಅಸ್ತು ಸ್ವಧಾ ।

ಪಿತೃಸ್ಥಾನದ ಬ್ರಾಹ್ಮಣನು 'ಬಡಿಸಿದ್ದು ಸಂದಿತು' ಎನ್ನಬೇಕು.

ಪುನರಭಿಘಾರ್ಯ ।

ಹೀಗೆ ಬಡಿಸಿದ ಅನ್ನದ ಮೇಲೆ ಪುನಃ ತುಪ್ಪದಿಂದ - ಅಭಿಘಾರ ಮಾಡುವುದು.

ಉಪವೀತಿ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಸಂಪರಿಸ್ತೀರ್ಯ ।

ಅಗ್ನಿಯ ಪರಿಸ್ತರಣಗಳನ್ನು (ದಕ್ಷಿಣಾಗ್ರವಾಗಿ ಮಾಡಿದ್ದ, ಪೂರ್ವ ಪಶ್ಚಿಮ ದಿಕ್ಕುಗಳಲ್ಲಿರುವ ದರ್ಭೆಗಳನ್ನು) ಉತ್ತರಾಗ್ರವಾಗಿ ಮಾಡುವುದು.

ಸಂಪರಿಷಿಚ್ಯ ।

ಅಗ್ನಿಗೆ ಪ್ರದಕ್ಷಿಣಾಕಾರವಾಗಿ ಕೂರ್ಚದಿಂದ ನೀರಿನಲ್ಲಿ ಪರಿಷೇಚನೆ ಮಾಡುವುದು.

ಮೇಕ್ಷಣಮಗ್ನೌ ಪ್ರಹರತಿ ।

ಕೈಗೆ ಪವಿತ್ರದೊಡನೆ ಸಿಕ್ಕಿಸಿಕೊಂಡಿದ್ದ (ಬಾಳೆ ಎಲೆ ಸೀಳಿನ ಮೇಲಿನ ಅನ್ನವನ್ನು 4 ಭಾಗಮಾಡಿದ) 3 ತುಂಡು ದರ್ಭೆಗಳನ್ನು (ಮೇಕ್ಷಣವನ್ನು) ಅಗ್ನಿಗೆ ಹಾಕಿ ಬಿಡುವುದು.

ಸ್ವಸ್ತಿ ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ ವಿದ್ಯಾಂ ಬುದ್ಧಿಂ ಶ್ರಿಯಂ ಬಲಂ ಆಯುಷ್ಯಂ ತೇಜ ಆರೋಗ್ಯಂ ಧೇಹಿ ಮೇ ಹವ್ಯವಾಹನ ॥

ಶ್ರಿಯಂ ಧೇಹಿ ಮೇ ಹವ್ಯವಾಹನ ಓಂ ನಮ ಇತಿ ॥

ಚತುಸ್ಸಾಗರ ಪರ್ಯಂತಂ ಗೋ ಬ್ರಾಹ್ಮಣೇಭ್ಯಃ ಶುಭಂ ಭವತು । ಓಂ ....... ಪ್ರವರ ಪೂರ್ವಕ ......... ಶರ್ಮಾ ಅಹಂ ಭೋ ಅಭಿವಾದಯೇ ॥

ಯಜ್ಞೇಶ್ವರನಿಗೆ ಈ ಮಂತ್ರದಿಂದ ಪ್ರವರ ಪೂರ್ವಕವಾಗಿ ನಮಸ್ಕಾರ ಮಾಡುವುದು. ಇಲ್ಲಿಗೆ ಅಗ್ನೌಕರಣ ಪೂರ್ತಿಯಾಯಿತು.

ಇದರ ಗೂಢಾರ್ಥವೇನೆಂದರೆ -

(ಅಮೂರ್ತ ಪಿತೃಗಳೆನಿಸಿ ಬ್ರಹ್ಮಲೋಕದ ಮೇಲೆ 'ಸುಮನಸ' ವೆಂಬಲ್ಲಿ ಇರುವ ಸೋಮಪರೆಂಬ ಪಿತೃಗಳು ಮತ್ತು ಅವರ ವಂಶ, ತೃಪ್ತಿ ಹೊಂದಲಿ. 'ಕವಿ' ಎಂಬ ಅಗ್ನಿ ಮತ್ತು ಆತನ ಪತ್ನಿ 'ಸ್ವಧಾ' ಇವರಲ್ಲಿ ಜನಿಸಿದ 'ಕಾವ್ಯ' ಎಂಬ ದೇವಲೋಕದಲ್ಲಿ ವಾಸಿಸುವ ಪಿತೃಗಳೂ ಅವರ ವಂಶೀಕರೂ ತೃಪ್ತರಾಗಲಿ, 'ಸಾಧ್ಯ' ಎಂಬ ದೇವಯೋನಿ ವಿಶೇಷದಿಂದ ಜನಿಸಿದ ಅಂಗಿರೋಮುನಿ ಪುತ್ರರಾದ 'ಉಪಹೂತ' ಎಂಬ ಪಿತೃಗಳೂ ಮತ್ತು ಅವರ ವಂಶೀಕರೂ ತೃಪ್ತರಾಗಲಿ. ಶ್ರಾದ್ಧಕರ್ಮಗಳಿಂದ ತೃಪ್ತಿ ಹೊಂದಿ, ಸಮಸ್ತ ಭುವನವನ್ನೂ ಪಿತೃಗಳನ್ನೂ ತೃಪ್ತಿಪಡಿಸುವ 'ಸೋಮ'ನಿಗೆ ಈ ಆಹುತಿ ಅರ್ಪಿತವಾಗಲಿ. ಈ ಸೋಮನು ಪ್ರೇತರೂಪದಲ್ಲಿರುವ ಸಮಸ್ತಪಿತೃಗಳನ್ನೂ ಕಾಪಾಡಲೆಂದು ಅವನ ತೃಪ್ತಿಗೆ ಈ ಆಹುತಿ ಅರ್ಪಿತವಾಗಲಿ. ಒಟ್ಟಿನಲ್ಲಿ ಅಮೂರ್ತಿಗಳೂ ಸಮೂರ್ತಿಗಳೂ ಆಗಿರುವ ಎಲ್ಲಾ ಪಿತೃಗಳಿಗೂ, ಕವ್ಯ-ವಾಹಕ ಅಗ್ನಿಗೂ, ಅಮೃತ ಕಿರಣಗಳಿಂದ ಪಿತೃಗಳನ್ನು ತೃಪ್ತಿಪಡಿಸುವ ಸೋಮನಿಗೂ ಈ ಹವಿಸ್ಸು ಅರ್ಪಿತವಾಗಲಿ ಎಂದರ್ಥ).

ವಿಶ್ವೇದೇವಸ್ಥಾನೇ ಹಸ್ತೋದಕಂ ದತ್ವಾ ವಿಶ್ವೇದೇವಪಾತ್ರಂ,* ದೇವಪಾತ್ರಂ, ಸುವಾಸಿನೀಪಾತ್ರಂ ಚ ಅಭಿಘಾರಯತಿ ॥

ವಿಶ್ವೇದೇವರ ಸ್ಥಾನದ ಬ್ರಾಹ್ಮಣನಿಗೆ ಹಸ್ತೋದಕ ಕೊಡುವುದು.

---

* ಪಾತ್ರ - ಊಟದ ಎಲೆ.

ವಿಶ್ವೇದೇವರ ಎಲೆ, ದೇವರ ಎಲೆ, ಸುವಾಸಿನಿ ಎಲೆ ಈ ಎಲ್ಲಾ ಎಲೆಗಳಿಗೂ ತುಪ್ಪದಿಂದ ಅಭಿಘಾರಮಾಡುವುದು. (ಪಿತೃಎಲೆಗೆ ಆಗಲೇ ಮಾಡಿರುತ್ತೆ).

(ಬಾಳೆ ಎಲೆಸೀಳಿನ ಮೇಲಿದ್ದ - ಪಿಂಡಕ್ಕೆ ಉಪಯೋಗಿಸಲು ಬೇಕಾದ ಆಗ್ನೇಯ '4' ಭಾಗದ ಅನ್ನವನ್ನು ಒಂದು ದೊನ್ನೆಗೆ ಹಾಕಿ. ಅದರ ಮೇಲೆ ಸ್ವಲ್ಪ ಎಳ್ಳು ಹಾಕಿ - ಅಗ್ನಿಯ ಉತ್ತರ ದಿಕ್ಕಿನಲ್ಲಿ ಒಂದು ಕಡೆ ಇಟ್ಟುಕೊಳ್ಳುವುದು. ಇದನ್ನು ಪಿಂಡಕಟ್ಟುವಾಗ ತೆಗೆದುಕೊಳ್ಳುವ ಅನ್ನದ ಜೊತೆಗೆ ಸೇರಿಸಿಕೊಳ್ಳುವುದು.

ನೈಋತ್ಯ ಭಾಗದ '3', ಈ ಅನ್ನವನ್ನು ಒಂದು ದೊನ್ನೆಯಲ್ಲಿ ವಿಕಿರಕ್ಕೆ ಉಪಯೋಗಿಸಿಕೊಳ್ಳಲು ಮೇಲ್ಕಂಡ ದೊನ್ನೆಯ ಮೇಲೆ ಇಟ್ಟುಕೊಳ್ಳುವುದು). ಬ್ರಾಹ್ಮಣರಿಗೆ ಮೊಸರನ್ನು ಬಡಿಸಿದ ನಂತರ ಇದಕ್ಕೆ ಸ್ವಲ್ಪ ಮೊಸರನ್ನು ಹಾಕಿಸಿಕೊಳ್ಳುವುದು.

# ಬ್ರಾಹ್ಮಣ ಭೋಜನ

ಅನ್ನಂ ಚ ಪಾಯಸಂ ಭಕ್ಷ್ಯಂ, ಘೃತಂ ಚ ವ್ಯಂಜನಾದಿಕಮ್ ।
ಸೂಪಮಂತೇ ಪ್ರದಾತವ್ಯಂ, ವಿನಾಜ್ಯಂ ದೇವಪೂರ್ವಕಮ್ ॥

ಎಲೆಗೆ ಬಡಿಸುವಾಗ ಮೊದಲು ವಿಶ್ವೇದೇವರ ಎಲೆ, ಆಮೇಲೆ ದೇವರೆಲೆ, ಆಮೇಲೆ ಪಿತೃಸ್ಥಾನದ ಎಲೆ, ಆಮೇಲೆ ಸುವಾಸಿನಿ ಎಲೆ ಈ ಕ್ರಮದಿಂದ ಕೆಳಕಂಡ ಚಿತ್ರದಲ್ಲಿರುವಂತೆ ಬಡಿಸಬೇಕು. ಪರಿಕರಗಳನ್ನು ಈ ಕೆಳಗಿನ ಕ್ರಮದಲ್ಲಿ ಬಡಿಸಬೇಕು.

1. ಅನ್ನ 2. ಪಾಯಸ 3. ಭಕ್ಷ್ಯ 4. ಘೃತ (ಸಣ್ಣ ದೊನ್ನೆಯಲ್ಲಿ) 5. ಪಲ್ಯಗಳು 6. ಗೊಜ್ಜುಗಳು. 7. ಕೊನೆಯಲ್ಲಿ ತೊವ್ವೆ.

ಇತರ ಪರಿಕರಗಳು :-

ಹೆಸರುಬೇಳೆ ಕೋಸುಂಬರಿ, ಹೆಸರುಬೇಳೆ ಸಾರು, ಬಾಳೆಕಾಯಿ ಮತ್ತು ಗೆಣಸಿನ ಪಲ್ಯಗಳು, ಸೌತೇಕಾಯಿ ಮಜ್ಜಿಗೇಹುಳಿ, ಹೇರಳೆಹಣ್ಣು, ಹಾಗಲಕಾಯಿ ಗೊಜ್ಜುಗಳು, ಹೆಸರುಬೇಳೆ ತೊವ್ವೆ, ರವೆ ಪಾಯಸ.

1. ಮಜ್ಜಿಗೆಹುಳಿ, ದೊನ್ನೆಯಲ್ಲಿ
2. ಸಾರು, ದೊನ್ನೆಯಲ್ಲಿ
3. ತುಪ್ಪ, ಸಣ್ಣ ದೊನ್ನೆಯಲ್ಲಿ

ಎರಡು ಅಗ್ರದ ಎಲೆಗಳು ಒಂದರಮೇಲೊಂದು ಹಾಸಬೇಕು.

ತಳಗಿನ ಎಲೆಯ, ಮೇಲಿನ ಅಂಚಿನಲ್ಲಿ ಪಲ್ಯ, ಗೊಜ್ಜು ಮುಂತಾದುವುಗಳನ್ನು ಬಡಿಸುವುದು.

**ಸರ್ವಾಣ್ಯನ್ನಾನಭಿಘಾರ್ಯ ।**

ಬಡಿಸಿದ ಎಲ್ಲಾ ಅನ್ನದ ಮೇಲೆ ತುಪ್ಪದಿಂದ ಅಭಿಘಾರ ಮಾಡುವುದು.




1 ಮಜ್ಜಿಗೆ ಹುಳಿಗೆ ದೊನ್ನೆ 3 ಸಾರಿಗೆ ದೊನ್ನೆ

2 ತುಪ್ಪಕ್ಕೆ, ಸಣ್ಣ ದೊನ್ನೆ

ಚಿತ್ರ. 8 ಊಟದ ಎಲೆಗೆ ಬಡಿಸುವ ಪದಾರ್ಥಗಳ ಸ್ಥಾನ ನಿರ್ದೇಶನದ ನಕ್ಷೆ

ಅನ್ನೇಷು ತುಲಸೀ, ದರ್ಭಾನ್ ನಿಕ್ಷಿಪ್ಯ ।

ಅನ್ನದ ಮೇಲೆ ಒಂದೊಂದು ತುಳಸೀದಳ, ತುಂಡುದರ್ಭೆಗಳನ್ನು ಇಡುವುದು.

ಅನ್ನ ಶುದ್ಧ್ಯರ್ಥಮ್, ಆಘ್ರಾಣದೋಷಪರಿಹಾರಾರ್ಥಂ ಅನ್ನಸೂಕ್ತ ಮಂತ್ರಪಠನಂ ಕರಿಷ್ಯೇ ।

'ಆಘ್ರಾಣದೋಷ ಪರಿಹಾರಕ್ಕಾಗಿ, ಮತ್ತು ಅನ್ನ ಶುದ್ಧಿಗಾಗಿ ಅನ್ನಸೂಕ್ತ ಮಂತ್ರವನ್ನು ಪಠಿಸುತ್ತೇನೆ' ಎಂದು ಕರ್ತೃವು ಹೇಳಬೇಕು.

ಕುರುಷ್ವ ।

ಅದಕ್ಕೆ ಬ್ರಾಹ್ಮಣರುಗಳು ''ಹಾಗೆ ಮಾಡು'' ಎನ್ನಬೇಕು.

## ಅನ್ನಸೂಕ್ತಮ್

ಓಂ ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮ ಓಷಧೀಭ್ಯಃ । ನಮೋ ವಾಚೇ ನಮೋ ವಾಚಸ್ಪತಯೇ ನಮೋ ವಿಷ್ಣವೇ ಬೃಹತೇ ಕರೋಮಿ । ಓಂ ಶಾಂತಿ ಶ್ಯಾಂತಿ ಶ್ಯಾಂತಿಃ ॥

ಏವಂ ತ್ರಿಃ । (ಇದನ್ನು ಮೂರು ಸಾರಿ ಪಠಿಸುವುದು).

ಸಹವೈ ದೇವಾನಾಂ ಚಾಸುರಾಣಾಂ ಚ ಯಜ್ಞೌ ಪ್ರತತಾವಾಸ್ತಾಂ ವಯಗ್‌ಂ ಸ್ವರ್ಗಂ ಲೋಕಮೇಷ್ಯಾಮೋ ವಯಮೇಷ್ಯಾಮ ಇತಿ ತೇ ಸುರಾಸ್ಸನ್ನಹ್ಯ ಸಹಸ್ಸೈವಾಚರನ್ ಬ್ರಹ್ಮಚರ್ಯೇಣ ತಪಸೈವ ದೇವಾಸ್ತೇ ಸುರಾ ಅಮುಹ್ಯಗ್‌ಂ ಸ್ತೇನ

ಪ್ರಾಜಾನಗ್‌ಂ ಸ್ತೇ ಪರಾಭವನ್ ತೇನ ಸ್ವರ್ಗಂ ಲೋಕಮಾಯನ್ ಪ್ರಸೃತೇನ ವೈ ಯಜ್ಞೇನ ದೇವಾಸ್ಸ್ವರ್ಗಂ ಲೋಕಮಾಯನ್ನಪ್ರಸೃತೇನಾ ಸುರಾನ್ಪರಾಭಾವಯನ್ ಪ್ರಸೃತೋ ಹ ವೈ ಯಜ್ಞೋಪವೀತಿನೋ ಯಜ್ಞೋ ಪ್ರಸೃತೋ ನುಪವೀತಿನೋ ಯತ್ಕಿಂಚ ಬ್ರಾಹ್ಮಣೋ ಯಜ್ಞೋಪವೀತ್ಯಧೀತೇ ಯಜತ ಏವ ತತ್ತಸ್ಮಾದ್ಯಜ್ಞೋಪವೀತ್ಯೇವಾಧೀಯೀತ ಯಾಜಯೇದ್ಯಜೇತ ವಾ ಯಜ್ಞಸ್ಯ ಪ್ರಸೃತ್ಯಾ ಅಜಿನಂ ವಾಸೋ ವಾ ದಕ್ಷಿಣತ ಉಪವೀಯ ದಕ್ಷಿಣಂ ಬಾಹು ಮುದ್ಧರತೇಽವಧತ್ತೇ ಸವ್ಯಮಿತಿ ಯಜ್ಞೋಪವೀತಮೇತದೇವ ವಿಪರೀತಂ ಪ್ರಾಚೀನಾವೀತಗ್‌ಂ ಸಂವೀತಂ ಮಾನುಷಮ್ ॥೧॥

ರಕ್ಷಾಗ್‌ಂಸಿ ಹ ವಾ ಪುರೋನುವಾಕೇ ತಪೋಗ್ರಮತಿಷ್ಠನ್ತ ತಾನ್ಪ್ರಜಾಪತಿ ರ್ವರೇಣೋಪಾ ಮಂತ್ರಯತ ತಾನಿ ವರಮವೃಣೀತಾದಿತ್ಯೋ ನೋ ಯೋದ್ಧಾ ಇತಿ ತಾನ್ಪ್ರಜಾಪತಿ ರ ಬ್ರವೀದ್ಯೋಧಯಧ್ವಮಿತಿ ತಸ್ಮಾದುತ್ತಿಷ್ಠನ್ ತಗ್‌ಂ ಹವಾ ತಾನಿ ರಕ್ಷಾಗ್‌ಂ ಸ್ಯಾದಿತ್ಯಂ ಯೋಧಯಂತಿ ಯಾವದಸ್ತ ಮನ್ವಗಾತ್ತಾನಿ ಹವಾ ಏತಾನಿ ರಕ್ಷಾಗ್‌ಂಸಿ ಗಾಯತ್ರಿಯಾಭಿಮಂತ್ರಿತೇ ನಾಂಭಸಾ ಶಾಮ್ಯಂತಿ ತದು ಹವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಸ್ಸಂಧ್ಯಾಯಾಂ ಗಾಯತ್ರಿಯಾಭಿಮಂತ್ರಿತಾ ಆಪ ಊರ್ಧ್ವಂ ವಿಕ್ಷಿಪಂತಿ ತಾ ಏತಾ ಆಪೋ ವಜ್ರೀ ಭೂತ್ವಾ ತಾನಿ ರಕ್ಷಾಗ್‌ಂಸಿ ಮಂದೇ ಹಾರುಣೇ ದ್ವೀಪೇ ಪ್ರಕ್ಷಿಪಂತಿ ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ ಪಾಪ್ಮಾನ-ಮವಧೂನ್ವಂತ್ಯುದ್ಯಂತಮಸ್ತಂ ಯಂತಮಾದಿತ್ಯಮಭಿಧ್ಯಾಯನ್ಕುರ್ವನ್ ಬ್ರಾಹ್ಮಣೋ ವಿದ್ವಾನ್ತ್ಸಕಲಂ ಭದ್ರಮಶ್ನುತೇಽಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಯಂ ಏವಂ ವೇದ ॥

ಕಿಗ್‌ಂಸ್ವಿದಾಸೀತ್ಪೂರ್ವಚಿತ್ತಿಃ ಕಿಗ್‌ಂಸ್ವಿದಾಸೀದ್ಬೃಹದ್ವಯಃ । ಕಿಗ್‌ಂಸ್ವಿದಾ

ಪಿಶಂಗಿಲಾ ಕಿಗ್ಂಸ್ವಿದಾಸೀತ್ಪಿಲಿಪ್ಪಿಲಾ ॥ ದ್ಯೌರಾಸೀತ್ಪೂರ್ವ ಚಿತ್ತಿರಶ್ವ ಆಸೀದ್ಬೃಹದ್ವಯಃ । ರಾತ್ರಿರಾಸೀತ್ಪಿಶಂಗಿಲಾ ವಿರಾಸೀತ್ಪಿಲಿಪ್ಪಿಲಾ ॥ ಕಸ್ವಿದೇಕಾಕೀ ಚರತಿ ಕ ಉ ಸ್ವಿಜ್ಜಾಯತೇ ಪುನಃ । ಕಿಗ್ಂಸ್ವಿದ್ಧಿಮಸ್ಯ ಭೇಷಜಂ ಕಿಗ್ಂಸ್ವಿದ್ದಾ ವಪನಂ ಮಹತ್ । ಸೂರ್ಯ ಏಕಾಕೀಚರತಿ ಚಂದ್ರಮಾ ಜಾಯತೇ ಪುನಃ । ಅಗ್ನಿರ್ ಹಿಮಸ್ಯ ಭೇಷಜಂ ಭೂಮಿರಾವಪನಂ ಮಹತ್ । ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾಃ ಪೃಚ್ಛಾಮಿತ್ವಾ ಭುವನಸ್ಯ ನಾಭಿಂ ॥ ಪೃಚ್ಛಾಮಿ ತ್ವಾ ವೃಷ್ಣೋ ಅಶ್ವಸ್ಯರೇತಃ ಪೃಚ್ಛಾಮಿ ವಾಚಃ ಪರಮಂ ವ್ಯೋಮ ॥ ವೇದಿಮಾಹುಃ ಪರಮಂತಂ ಪೃಥಿವ್ಯಾ ಯಜ್ಞಮಾಹು ರ್ಭುವನಸ್ಯ ನಾಭಿಂ । ಸೋಮಮಾಹುರ್ವೃಷ್ಣೋ ಅಶ್ವಸ್ಯ ರೇತೋ ಬ್ರಹ್ಮೈವ ವಾಚಃ ಪರಮಂ ವ್ಯೋಮ ॥೩॥ ತೇಜಸಾ ವಾ ಏಷ ಬ್ರಹ್ಮವರ್ಚಸೇನ ವ್ಯೃಧ್ಯತೇ । ಯೋಽಶ್ವಮೇಧೇನ ಯಜತೇ । ಹೋತಾ ಚ ಬ್ರಹ್ಮಾ ಚ ಬ್ರಹ್ಮೋದ್ಯಂ ವದತಃ । ತೇಜಸಾ ಚೈವೈನಂ ಬ್ರಹ್ಮವರ್ಚಸೇನ ಚ ಸಮರ್ಧಯತಃ । ದಕ್ಷಿಣತೋ ಬ್ರಹ್ಮಾ ಭವತಿ । ದಕ್ಷಿಣತ ಆಯತನೋ ವೈ ಬ್ರಹ್ಮಾ । ಬಾರ್ಹಸ್ಪತ್ಯೋ ವೈ ಬ್ರಹ್ಮಾ । ಬ್ರಹ್ಮವರ್ಚಸಮೇವಾಸ್ಯ ದಕ್ಷಿಣತೋ ದಧಾತಿ । ತಸ್ಮಾದ್ದಕ್ಷಿಣೋರ್ಧೋ ಬ್ರಹ್ಮ ವರ್ಚಸಿತರಃ । ಉತ್ತರತೋ ಹೋತಾ ಭವತಿ ॥೧॥ ಉತ್ತರತ ಆಯತನೋ ವೈ ಹೋತಾ । ಆಗ್ನೇಯೋ ವೈ ಹೋತಾ । ತೇಜೋ ವಾ ಅಗ್ನಿಃ । ತೇಜ ಏವಾಸ್ಯೋತ್ತರತೋ ದಧಾತಿ । ತಸ್ಮಾದುತ್ತರೋರ್ಧಸ್ತೇಜಸ್ವಿತರಃ । ಯೂಪಮಭಿತೋ ವದತಃ । ಯಜಮಾನ ದೇವತ್ಯೋ ವೈ ಯೂಪಃ । ಯಜಮಾನಮೇವ ತೇಜಸಾ ಚ ಬ್ರಹ್ಮವರ್ಚಸೇನ ಚ ಸಮರ್ಧಯತಃ । ಕಿಗ್ಂಸ್ವಿದಾಸೀತ್ಪೂರ್ವಚಿತ್ತಿರಿತ್ಯಾಹ । ದ್ಯೌರ್ವೈ ವೃಷ್ಟಿಃ ಪೂರ್ವಚಿತ್ತಿಃ ॥೨॥ ದಿವಮೇವ ವೃಷ್ಟಿಮವರುಂಧೇ । ಕಿಗ್ಂಸ್ವಿದಾಸೀದ್ಬೃಹದ್ವಯ ಇತ್ಯಾಹ । ಅಶ್ವೋ ವೈ ಬೃಹದ್ವಯಃ । ಅಶ್ವಮೇವಾ

ವರುಂಧೇ । ಕಿಗ್‌ಂಸ್ವಿದಾಸೀತ್ಪಿಶಂಗಿಲೇತ್ಯಾಹ । ರಾತ್ರಿರ್ವೈಪಿಶಂಗಿಲಾ । ರಾತ್ರಿ-
ಮೇವಾವರುಂಧೇ । ಕಿಗ್‌ಂಸ್ವಿದಾಸೀತ್ಪಿಲಿಪ್ಪಿಲೇತ್ಯಾಹ । ಶ್ರೀರ್ವೈ ಪಿಲಿಪ್ಪಿಲಾ ।
ಅನ್ನಾದ್ಯಮೇವಾವರುಂಧೇ ॥೩॥ ಕಸ್ವಿದೇಕಾಕೀ ಚರತೀತ್ಯಾಹ । ಅಸೌ ವಾ ಆದಿತ್ಯ
ಏಕಾಕೀ ಚರತಿ । ತೇಜ ಏವಾವರುಂಧೇ । ಕ ಉ ಸ್ವಿಜ್ಜಾಯತೇ ಪುನರಿತ್ಯಾಹ ।
ಚಂದ್ರಮಾ ವೈ ಜಾಯತೇ ಪುನಃ । ಆಯುರೇವಾವರುಂಧೇ । ಕಿಗ್‌ಂಸ್ವಿದ್ಧಿಮಸ್ಯ
ಭೇಷಜಮಿತ್ಯಾಹ । ಅಗ್ನಿರ್ವೈಹಿಮಸ್ಯ ಭೇಷಜಂ । ಬ್ರಹ್ಮವರ್ಚಸಮೇವಾವರುಂಧೇ ॥
ಕಿಗ್‌ಂಸ್ವಿದಾ ವಪನಂ ಮಹದಿತ್ಯಾಹ ॥೪॥ ಅಯಂ ವೈ ಲೋಕ ಆವಪನಂ ಮಹತ್ ।
ಅಸ್ಮಿನ್ನೇವ ಲೋಕೇ ಪ್ರತಿತಿಷ್ಠತಿ । ಪೃಚ್ಛಾಮಿ ತ್ವಾ ಪರಮಂತಂ ಪೃಥಿವ್ಯಾ ಇತ್ಯಾಹ ।
ವೇದಿರ್ವೈ ಪರೋಽಂತಃ ಪೃಥಿವ್ಯಾಃ । ವೇದಿಮೇವಾವರುಂಧೇ ॥ ಪೃಚ್ಛಾಮಿ ತ್ವಾ
ಭುವನಸ್ಯ ನಾಭಿಮಿತ್ಯಾಹ । ಯಜ್ಞೋ ವೈ ಭುವನಸ್ಯ ನಾಭಿಃ । ಯಜ್ಞಮೇವಾ
ವರುಂಧೇ ॥ ಪೃಚ್ಛಾಮಿ ತ್ವಾ ವೃಷ್ಣೋ ಅಶ್ವಸ್ಯರೇತ ಇತ್ಯಾಹ । ಸೋಮೋ ವೈ
ವೃಷ್ಣೋ ಅಶ್ವಸ್ಯ ರೇತಃ । ಸೋಮಪೀಥಮೇವಾವರುಂಧೇ ॥ ಪೃಚ್ಛಾಮಿ ವಾಚಃ
ಪರಮಂ ವ್ಯೋಮೇತ್ಯಾಹ । ಬ್ರಹ್ಮ ವೈ ವಾಚಃ ಪರಮಂ ವ್ಯೋಮ । ಬ್ರಹ್ಮ
ವರ್ಚಸಮೇವಾವರುಂಧೇ ॥೫॥ ಆಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮವರ್ಚಸೀ
ಜಾಯತಾಮಾಸ್ಮಿನ್ರಾಷ್ಟ್ರೇ ರಾಜನ್ಯ ಇಷವ್ಯಃ ಶೂರೋ ಮಹಾರಥೋ ಜಾಯತಾಂ
ದೋಗ್ಧ್ರೀ ಧೇನುರ್ವೋಢಾನಡ್ವಾನಾಶುಃ ಸಪ್ತಿಃ ಪುರಂಧ್ರಿರ್ಯೋಷಾ ಜಿಷ್ಣೂ ರಥೇಷ್ಠಾಃ
ಸಭೇಯೋ ಯುವಾಸ್ಯ ಯಜಮಾನಸ್ಯ ವೀರೋ ಜಾಯತಾಂ ನಿಕಾಮೇ ನಿಕಾಮೇ ನಃ
ಪರ್ಜನ್ಯೋ ವರ್ಷತು ಫಲಿನ್ಯೋ ನ ಓಷಧಯಃ ಪಚ್ಯಂತಾಂ ಯೋಗಕ್ಷೇಮೋ ನಃ
ಕಲ್ಪತಾಮ್ ॥೬॥ ಆಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾಮಿತ್ಯಾಹ ।
ಬ್ರಾಹ್ಮಣ ಏವ ಬ್ರಹ್ಮವರ್ಚಸಂ ದಧಾತಿ ॥ ತಸ್ಮಾತ್ಪುರಾ ಬ್ರಾಹ್ಮಣೋ

ಽಕ್ಷ ವರ್ಚಸ್ವೀ ಜಾಯತ ॥ ಆಸ್ಮಿನ್ ರಾಷ್ಟ್ರೇ ರಾಜನ್ಯ ಇಷವ್ಯಃ ಶೂರೋ ಮಹಾರಥೋ ಜಾಯತಾಮಿತ್ಯಾಹ । ರಾಜನ್ಯ ಏವ ಶೌರ್ಯಂ ಮಹಿಮಾನಂ ದಧಾತಿ । ತಸ್ಮಾತ್ಪುರಾ ರಾಜನ್ಯ ಇಷವ್ಯಃ ಶೂರೋ ಮಹಾರಥೋ ಜಾಯತ । ದೋಗ್ಧ್ರೀ ಧೇನುರಿತ್ಯಾಹ । ಧೇನ್ವಾಮೇವಪಯೋ ದಧಾತಿ । ತಸ್ಮಾತ್ಪುರಾ ದೋಗ್ಧ್ರೀ ಧೇನುರ್ಜಾಯತ । ವೋಢಾನಡ್ವಾನಿತ್ಯಾಹ । ಅನಡು ಹ್ಯೇವ ವೀರ್ಯಂ ದಧಾತಿ । ತಸ್ಮಾತ್ಪುರಾ ವೋಢಾನಡ್ವಾನಜಾಯತ ॥ ಆಶುಸ್ಸಪ್ತಿರಿತ್ಯಾಹ । ಅಶ್ವ ಏವ ಜವಂ ದಧಾತಿ । ತಸ್ಮಾತ್ಪುರಾಶುರಶ್ವೋ ಜಾಯತ ॥ ಪುರಂಧಿರ್ಯೋಷೇತ್ಯಾಹ । ಯೋಷಿತ್ಯೇವ ರೂಪಂ ದಧಾತಿ । ತಸ್ಮಾತ್ ಸ್ತ್ರೀಯುವತಿಃ ಪ್ರಿಯಾ ಭಾವುಕಾ । ಜಿಷ್ಣೂ ರಥೇಷ್ಠಾ ಇತ್ಯಾಹ । ಆಹ ವೈ ತತ್ರ ಜಿಷ್ಣೂ ರಥೇಷ್ಠಾ ಜಾಯತೇ ॥೭॥ ಯತ್ರೈತೇನ ಯಜ್ಞೇನ ಯಜಂತೇ । ಸಭೇಯೋ ಯುವೇತ್ಯಾಹ । ಯೋ ವೈ ಪೂರ್ವವಯಸೀ । ಸ ಸಭೇಯೋ ಯುವಾ । ತಸ್ಮಾದ್ಯುವಾ ಪುಮಾನ್ ಪ್ರಿಯೋ ಭಾವುಕಃ । ಆಸ್ಯ ಯಜಮಾನಸ್ಯ ವೀರೋ ಜಾಯತಾಮಿತ್ಯಾಹ । ಆಹ ವೈ ತತ್ರ ಯಜಮಾನಸ್ಯ ವೀರೋ ಜಾಯತೇ । ಯತ್ರೈತೇನ ಯಜ್ಞೇನ ಯಜಂತೇ । ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತ್ವಿತ್ಯಾಹ । ನಿಕಾಮೇ ನಿಕಾಮೇಹ ವೈ ತತ್ರ ಪರ್ಜನ್ಯೋ ವರ್ಷತಿ । ಯತ್ರೈತೇನ ಯಜ್ಞೇನ ಯಜಂತೇ । ಫಲಿನ್ಯೋ ನ ಓಷಧಯಃ ಪಚ್ಯಂತಾಮಿತ್ಯಾಹ । ಫಲಿನ್ಯೋ ಹ ವೈ ತತ್ರೌಷಧಯಃ ಪಚ್ಯಂತೇ । ಯತ್ರೈತೇನ ಯಜ್ಞೇನ ಯಜಂತೇ । ಯೋಗಕ್ಷೇಮೋ ನಃ ಕಲ್ಪತಾಮಿತ್ಯಾಹ । ಕಲ್ಪತೇ ಹ ವೈ ತತ್ರ ಪ್ರಜಾಭ್ಯೋ ಯೋಗಕ್ಷೇಮಃ । ಯತ್ರೈತೇನ ಯಜ್ಞೇನ ಯಜಂತೇ ॥ ಅಹಮಸ್ಮಿ ಪ್ರಥಮಜಾ ಋತಸ್ಯ । ಪೂರ್ವಂ ದೇವೇಭ್ಯೋ ಅಮೃತಸ್ಯ ನಾಭಿಃ । ಯೋ ಮಾ ದದಾತಿ ಸ ಇ ದೇವಮಾವಾಃ । ಅಹಮನ್ನಮನ್ನ ಮದಂತಮದ್ಮಿ । ಪೂರ್ವಮಗ್ನೇರಪಿ ದಹತ್ಯನ್ನಂ । ಯತ್ತೌ ಹಾಸಾತೇ

ಅಹಮುತ್ತರೇಷು । ವ್ಯಾತ್ತಮಸ್ಯ ಪಶವಃ ಸುಜಂಭಮ್ । ಪಶ್ಯಂತಿ ಧೀರಾಃ ಪ್ರಚರಂತಿ ಪಾಕಾಃ । ಜಹಾಮ್ಯನ್ಯಂ ನ ಜಹಾಮ್ಯನ್ಯಂ । ಅಹಮನ್ನಂ ವಶಮಿಚ್ಚರಾಮಿ । ಸಮಾನಮರ್ಥಂ ಪರ್ಯೇಮಿ ಭುಂಜತ್ । ಕೋ ಮಾಮನ್ನಂ ಮನುಷ್ಯೋ ದಯೇತ । ಪರಾಕೇ ಅನ್ನಂ ನಿಹಿತಂ ಲೋಕ ಏತತ್ । ವಿಶ್ವೈರ್ದೇವೈಃ ಪಿತೃಭಿರ್ಗುಪ್ತಮನ್ನಮ್ । ಯದದ್ಯತೇ ಲುಪ್ಯತೇ ಯತ್ಪರೋಪ್ಯತೇ । ಶತತಮೀಸಾತನೂರ್ಮೇ ಬಭೂವ । ಮಹಾಂತಾ ಚರೂ ಸಕೃದ್ದುಗ್ಧೇನಪಪ್ರೌ । ದಿವಂ ಚ ಪೃಶ್ನಿಪೃಥಿವೀಂ ಚ ಸಾಕಮ್ । ತತ್ಸಂಪಿಬಂತೋ ನಮಿನಂತಿ ವೇಧಸಃ । ನೈತದ್ಭೂಯೋ ಭವತಿ ನೋ ಕನೀಯಃ । ಅನ್ನಂ ಪ್ರಾಣಮನ್ನಮಪಾನಮಾಹುಃ । ಅನ್ನಂ ಮೃತ್ಯುಂ ತಮು ಜೀವಾತುಮಾಹುಃ । ಅನ್ನಂ ಬ್ರಹ್ಮಾಣೋ ಜರಸಂ ವದಂತಿ । ಅನ್ನಮಾಹುಃ ಪ್ರಜನನಂ ಪ್ರಜಾನಾಮ್ । ಮೋಘಮನ್ನಂ ವಿಂದತೇ ಅಪ್ರಚೇತಾಃ । ಸತ್ಯಂ ಬ್ರವೀಮಿ ವಧ ಇತ್ಸ ತಸ್ಯ । ನಾರ್ಯಮಣಂ ಪುಷ್ಯತಿ ನೋ ಸಖಾಯಮ್ । ಕೇವಲಾಘೋ ಭವತಿ ಕೇವಲಾದೀ । ಅಹಂ ಮೇಘಃ ಸ್ತನಯನ್ವರ್ಷನ್ನಸ್ಮಿ । ಮಾಮದಂತ್ಯಹಮದ್ಮ್ಯನ್ಯಾನ್ । ಅಹಗ್ಂ ಸದಮೃತೋ ಭವಾಮಿ । ಮದಾದಿತ್ಯಾ ಅಧಿ ಸರ್ವೇ ತಪಂತಿ ॥

ಅನ್ನಂ ನ ನಿಂದ್ಯಾತ್ । ತದ್ ವ್ರತಮ್ । ಪ್ರಾಣೋ ವಾ ಅನ್ನಮ್ । ಶರೀರಮನ್ನಾದಮ್ । ಪ್ರಾಣೇ ಶರೀರಂ ಪ್ರತಿಷ್ಠಿತಮ್ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥

ಅನ್ನಂ ನ ಪರಿಚಕ್ಷೀತ । ತದ್‌ವ್ರತಮ್ । ಆಪೋ ವಾ ಅನ್ನಮ್ । ಜ್ಯೋತಿ

ನ್ನಾದಮ್ । ಅಪ್ಸು ಜ್ಯೋತಿಃ ಪ್ರತಿಷ್ಠಿತಮ್ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥

ಅನ್ನಂ ಬಹು ಕುರ್ವೀತ । ತದ್ವ್ರತಮ್ । ಪೃಥಿವೀ ವಾ ಅನ್ನಮ್ । ಆಕಾಶೋಽನ್ನಾದಃ । ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥

ನ ಕಂಚನ ವಸತೌ ಪ್ರತ್ಯಾಚಕ್ಷೀತ । ತದ್ವ್ರತಮ್ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ । ಏತದ್ವೈ ಮುಖತೋಽನ್ನಗ್ಂರಾದ್ಧಮ್ । ಮುಖತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವೈ ಮಧ್ಯತೋಽನ್ನಗ್ಂ ರಾದ್ಧಮ್ । ಮಧ್ಯತೋಽಸ್ಮಾ ಅನ್ನಗ್ಂ ರಾಧ್ಯತೇ । ಏತದ್ವಾ ಅಂತತೋನ್ನಗ್ಂ ರಾದ್ಧಮ್ । ಅಂತತೋಸ್ಮಾ ಅನ್ನಗ್ಂ ರಾಧ್ಯತೇ । ಯ ಏವಂ ವೇದ । ಕ್ಷೇಮ ಇತಿ ವಾಚಿ । ಯೋಗಕ್ಷೇಮ ಇತಿ ಪ್ರಾಣಾಪಾನಯೋಃ । ಕರ್ಮೇತಿ ಹಸ್ತಯೋಃ । ಗತಿರಿತಿ ಪಾದಯೋಃ । ವಿಮುಕ್ತಿರಿತಿ ಪಾಯೌ । ಇತಿ ಮಾನುಷೀಃ ಸಮಾಜ್ಞಾಃ । ಅಥ ದೈವೀಃ । ತೃಪ್ತಿರಿತಿ ವೃಷ್ಟೌ । ಬಲಮಿತಿ ವಿದ್ಯುತಿ । ಯಶ ಇತಿ ಪಶುಷು । ಜ್ಯೋತಿರಿತಿ ನಕ್ಷತ್ರೇಷು । ಪ್ರಜಾತಿರಮೃತಮಾನಂದ ಇತ್ಯುಪಸ್ಥೇ । ಸರ್ವಮಿತ್ಯಾಕಾಶೇ । ತತ್ ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ । ಮಹಾನ್ ಭವತಿ । ತನ್ಮನ ಇತ್ಯುಪಾಸೀ । ಮಾನವಾನ್ ಭವತಿ ।

ತನ್ನಮ ಇತ್ಯುಪಾಸೀತ । ನಮ್ಯಂತೇಽಸ್ಮೈ ಕಾಮಾಃ । ತದ್ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ ಭವತಿ । ತದ್ಬ್ರಹ್ಮಣಃ ಪರಿಮರ ಇತ್ಯುಪಾಸೀತ । ಪರ್ಯೇಣಂ ಮ್ರಿಯಂತೇ ದ್ವಿಷಂತಃ ಸಪತ್ನಾಃ । ಪರಿ ಯೇ ಪ್ರಿಯಾ ಭ್ರಾತೃವ್ಯಾಃ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂವಿತ್ ।

ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನಮುಪಸಂಕ್ರಮ್ಯ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನ-ಮುಪಸಂಕ್ರಮ್ಯ । ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಮ್ಯ । ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾಂಲ್ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ । ಏತತ್ ಸಾಮ ಗಾಯನ್ನಾಸ್ತೇ । ಹಾ೩ವು ಹಾ೩ವು ಹಾ೩ವು । ಅಹಮನ್ನಮಹಮನ್ನಮಹಮನ್ನಮ್ । ಅಹಮನ್ನಾದೋ೩ಽಹ ಮನ್ನಾದೋ೩ಽಹಮನ್ನಾದಃ । ಅಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ೩ಸ್ಯ । ಪೂರ್ವಂ ದೇವೇಭ್ಯೋ ಅಮೃತಸ್ಯ ನಾ೩ಭಾಯಿ । ಯೋ ಮಾ ದದಾತಿ ಸ ಇ ದೇವಮಾ೩ಽವಾಃ । ಅಹಮನ್ನಮನ್ನಮದಂತಮಾ೩ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾಮ್ । ಸುವರ್ನ ಜ್ಯೋತೀಃ । ಯ ಏವಂ ವೇದ । ಇತ್ಯುಪನಿಷತ್ ॥

ಈ ರೀತಿ ಅನ್ನಸೂಕ್ತಾದಿಗಳನ್ನು ಪಠಿಸುವುದು.

ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।
ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ನಮೋ ನಮಃ ॥
ಈಶಾನಃ ಪಿತೃರೂಪೇಣ ಮಹಾದೇವೋ ಮಹೇಶ್ವರಃ ।
ಪ್ರೀಯತಾಂ ಭಗವಾನೀಶಃ ಪರಮಾತ್ಮಾ ಸದಾಶಿವೋಮ್ ॥
ಗಯಾಯಾಂ ಪಿತೃರೂಪೇಣ ಸ್ವಯಮೇವ ಜನಾರ್ದನಃ ।
ತಂ ದೃಷ್ಟ್ವಾ ಪುಂಡರೀಕಾಕ್ಷಂ ಪಿತೄಣಾಮಕ್ಷಯೋ ಭವೇತ್ ॥

ಆಮೇಲೆ ಈ ಶ್ಲೋಕಗಳಿಂದ ಸಮಸ್ತ ದೇವತೆಗಳನ್ನೂ, ಪಿತೃಗಳನ್ನೂ ಮಹೇಶ್ವರ-ಜನಾರ್ದನರನ್ನೂ ಸ್ತೋತ್ರ ಮಾಡುವುದು.

ವಿಶ್ವೇದೇವ ಸಮೀಪೇ ಉದಙ್ಮುಖ ಉಪವಿಶ್ಯ ।

ವಿಶ್ವೇದೇವರ ಎಲೆಮುಂದೆ ಉತ್ತರಾಭಿಮುಖವಾಗಿ ಕುಳಿತುಕೊಳ್ಳುವುದು.

ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ । ಇತ್ಯನ್ನಾದಿಕಂ ಪ್ರೋಕ್ಷ್ಯ ॥

ಈ ಗಾಯತ್ರೀ ಮಂತ್ರದಿಂದ ವಿಶ್ವೇದೇವರ ಎಲೆಯಲ್ಲಿನ ಅನ್ನಾದಿಗಳನ್ನು ಕೂರ್ಚದ ನೀರಿನಿಂದ ಪ್ರೋಕ್ಷಿಸುವುದು.

ತೂಷ್ಣೀಂ ಪ್ರದಕ್ಷಿಣಂ ಪರಿಷಿಚ್ಯ । ಹಸ್ತೋದಕಂ ದತ್ವಾ ॥

ತೂಷ್ಣಿಯಾಗಿ ಅಂದರೆ ಮಂತ್ರವಿಲ್ಲದೆ, ಬಡಿಸಿದ ಎಲೆಯನ್ನು ಪ್ರದಕ್ಷಿಣೆಯಾಗಿ ಅದೇ ಕೂರ್ಚದಿಂದ ಪರಿಷೇಚಿಸುವುದು. ಬ್ರಾಹ್ಮಣನಿಗೆ ಕೂರ್ಚದಿಂದ ಹಸ್ತೋದಕ ಕೊಡುವುದು.

ದಕ್ಷಿಣೋತ್ತರಾಭ್ಯಾಂ ಪಾಣಿಭ್ಯಾಂ ಭೋಜನಪಾತ್ರಂ ಪರಿಗೃಹ್ಯ ॥

ಎರಡು ಹಸ್ತಗಳಿಂದ ಭೋಜನಕ್ಕೆ ಬಡಿಸಿದ ಎಲೆಯ ಮುಂಭಾಗದ ಮಧ್ಯದ ಅಂಚನ್ನು ಹಿಡಿದುಕೊಳ್ಳುವುದು. (ಎರಡು ಅಂಗೈ ತುದಿಗಳಿಂದ ಇಕ್ಕಳದಲ್ಲಿ ಹಿಡಿದುಕೊಂಡಹಾಗೆ).

ದೇವ ಸವಿತಃ ಪ್ರಸುವ ॥

ಪೃಥಿವೀ ತೇ ಪಾತ್ರಂ ದ್ಯೌರಪಿಧಾನಂ ಬ್ರಹ್ಮಣಸ್ತ್ವಾಮುಖೇ ಅಮೃತಂ ಜುಹೋಮಿ ಬ್ರಾಹ್ಮಣಾನಾಂ ತ್ವಾ । ಪ್ರಾಣಾಪಾನಯೋರ್ಜುಹೋಮ್ಯಕ್ಷಿತಮಸಿ ಮೈಷಾಂ ಕ್ಷೇಷ್ಠಾ ಅಮುತ್ರಾಮುಷ್ಮಿನ್ ಲೋಕೇ ॥ ಇತ್ಯಭಿಮಂತ್ರ್ಯ ।

ಹೀಗೆ ಎಲೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಈ ಮಂತ್ರದಿಂದ ಎಲೆಯನ್ನು ಅಭಿಮಂತ್ರಿಸಬೇಕು.

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್ । ಸಮೂಢಮಸ್ಯ ಪಾಗ್ಂ ಸುರೇ ॥

ಸ್ವಾಹಾ । ವಿಷ್ಣೋ ಹವ್ಯಂ ರಕ್ಷಸ್ವ ॥

ಈ ಮಂತ್ರದಿಂದ ವಿಶ್ವೇದೇವರ ಸ್ಥಾನದ ಬ್ರಾಹ್ಮಣನ ಬಲಗೈ ಹಿಡಿದುಕೊಂಡು (ಹೆಬ್ಬೆರಳನ್ನು ಬಿಟ್ಟು ಮಿಕ್ಕ 4 ಬೆರಳುಗಳನ್ನು ಹಿಡಿದುಕೊಂಡು) ಬಡಿಸಿರುವ ಪದಾರ್ಥಗಳನ್ನು - 'ಅನ್ನಂ ಚ ಪಾಯಸಂ....' ಎಂಬ ಹಿಂದಿನ ಮಂತ್ರದ ಕ್ರಮದಿಂದ ಪ್ರದಕ್ಷಿಣೆಯಾಗಿ ಆ ಬ್ರಾಹ್ಮಣನ ಹೆಬ್ಬೆರಳಿನಿಂದ ಮುಟ್ಟಿಸುವುದು.

ಪುರೂರವಾರ್ದ್ರವ ಸಂಜ್ಞಕಾ, ವಿಶ್ವೇದೇವಾ ದೇವತಾಃ । ಇದಮನ್ನಂ ಹವ್ಯಂ ಬ್ರಾಹ್ಮಣಸ್ತು ಆಹವನೀಯಾರ್ಥೇ ದತ್ತಂ ದಾಸ್ಯಮಾನಂ ಚ ಆತೃಪ್ತೇಃ ತತ್ಸರ್ವಂ । ಗಯೇಯಂ ಭೂಃ । ಗದಾಧರೋ ಭೋಕ್ತಾ । ಅನ್ನಂ ಬ್ರಹ್ಮ । ಅಹಂ ಚ ಬ್ರಹ್ಮ । ಭೋಕ್ತಾ ಚ ಬ್ರಹ್ಮ । ಸರ್ವಂ ಖಲ್ವಿದಂ ಬ್ರಹ್ಮ ।।

ಕಲ್ಪಿತ ಸುವರ್ಣಮಯ ಪಾತ್ರೇ ಸ್ಥಿತಮನ್ನಂ ಅಕ್ಷಯ ವಟವೃಕ್ಷಚ್ಛಾಯೇಯಂ । ಪುರೂರವಾರ್ದ್ರವ ಸಂಜ್ಞಕೇಭ್ಯೋ ವಿಶ್ವೇಭ್ಯೋ ದೇವೇಭ್ಯಃ । ಇದಮಿದಮನ್ನಂ । ಅಮೃತ ಸ್ವರೂಪಂ । ಆತುಷ್ಯೇದಾಸ್ಯಮಾನಂ । ಅಕ್ಷಯ್ಯತೃಪ್ತ್ಯರ್ಥಂ, ಯಥಾಭಾಗಂ ಹವ್ಯಂ ಓಂ ತತ್ಸತ್ । ಸ್ವಾಹಾ ನಮಮ । ನಮಮ ।।

ಗಯಾಯಾಂ ಶ್ರೀವಿಷ್ಣುಪಾದಾದಿ ಸಮಸ್ತ ಪಾದೇಷು ಸಮಸ್ತ ತೀರ್ಥೇಷು ದತ್ತಮಸ್ತ್ವಿತಿ । ಭವಂತೋ ಬ್ರುವಂತು ।। ಗದಾಧರಃ ಪ್ರೀಯತಾಮ್ ।।

ವಿಶ್ವೇದೇವತಾ ಸ್ವರೂಪಿ ಬ್ರಾಹ್ಮಣನೇ ! ''ಈ ಹೆಬ್ಬೆಟ್ಟಿನಿಂದ ಮುಟ್ಟಿಸಿ ತೋರಿಸಿರುವುದೇ ನಿನಗಾಗಿ ನಾನು ಅರ್ಪಿಸಿರುವ ಅನ್ನಾದಿಗಳು'' ಎನ್ನಬೇಕು. ಈ 'ಸ್ಥಲವೇ' ಗಯಾಕ್ಷೇತ್ರ ಇಲ್ಲಿರುವ ಎಲ್ಲವೂ ಬ್ರಹ್ಮವೇ. ಅನ್ನವೂ ಬ್ರಹ್ಮ. ನಾನೂ ಬ್ರಹ್ಮ. ಭೋಜನ ಮಾಡುವ ನೀನೂ ಬ್ರಹ್ಮ. ಬಾಳೆಎಲೆಯೇ ಚಿನ್ನದ ಹರಿವಾಣ. 'ಅಕ್ಷಯ ವಟವೃಕ್ಷವೇ ಈ ಸ್ಥಳದಲ್ಲಿದೆ. ಹೀಗೆಂದು ನಾನು ಭಾವಿಸಿ - ಈ ಅನ್ನಾದಿ ಪರಿಕರಗಳನ್ನು ಅಮೃತ ಸ್ವರೂಪವೆಂದೇ ತಿಳಿದು ನಿನಗೆ ತೃಪ್ತಿಯಾಗಲೆಂದೂ, ಗಯೆಯಲ್ಲಿ, ವಿಷ್ಣುಪಾದದಲ್ಲಿ, ಸಮಸ್ತ ತೀರ್ಥಗಳ ಸನ್ನಿಧಿಯಲ್ಲಿ ಗದಾಧರನಿಗೆ ದಾನಮಾಡಿದ ಫಲವು ಲಭಿಸಲಿ ಎಂದು ಹೇಳಿ,

ದಕ್ಷಿಣೆಯನ್ನು ಅಕ್ಕಿಕಾಳು, ನೀರು ಸಮೇತ, ಆತನ ಎಲೆಯ ಮುಂದೆ, ಆ ಎಲೆಯನ್ನು ಎಡಗೈಲಿ ಮುಟ್ಟಿಕೊಂಡು, ಆತನ ಕೈಗೆ ಬಲಗೈನಿಂದ, ಗದಾಧರ ಪ್ರೀತನಾಗಲೆಂದು ಹೇಳಿ, ಕೊಡುವುದು.

**ಗಯಾಯಾಂ ದತ್ತಂ ಅಸ್ತು । ಪ್ರೀಯತಾಂ ಗದಾಧರಃ ।।**

ವಿಶ್ವೇದೇವ ಬ್ರಾಹ್ಮಣನು 'ಗದಾಧರ ಪ್ರೀತನಾಗುವನು' ಎನ್ನಬೇಕು.

**ಯೇ ದೇವಾ ದಿವ್ಯೇಕಾದಶಸ್ಥ । ಪೃಥಿವ್ಯಾ, ಮಧ್ಯೇಕಾದಶಸ್ಥ । ಅಪ್ಸುಷದೋ ಮಹಿನ್ಯೆಕಾದಶಸ್ಥ । ತೇ ದೇವಾ ಯಜ್ಞಮಿಮಂ ಜುಷಧ್ವಮ್ ।।**

ಈ ಭೋಜನವು ದೇವಯಜ್ಞವೆಂದು ಭಾವಿಸಿ ಈ ಮಂತ್ರ ಹೇಳಬೇಕು.

ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ ।
ಯೇಹ್ಯತ್ರ ವಿಹಿತಾ ಶ್ರಾದ್ಧೇ ಸಾವಧಾನಾ ಭವಂತು ತೇ ॥

ವಿಶ್ವೇದೇವರನ್ನು ಆ ಬ್ರಾಹ್ಮಣನಲ್ಲಿ ಬಂದು ಸ್ಥಾಪಿತರಾಗುವಂತೆ ಪ್ರಾರ್ಥಿಸುವುದು. ಸಾವಧಾನವಾಗಿ ಭೋಜನ ಸ್ವೀಕರಿಸುವಂತೆ ಪ್ರಾರ್ಥಿಸುವುದು.

ಸಾವಧಾನೋಽಸ್ಮಿ ।

ವಿಶ್ವೇದೇವರ ಸ್ಥಾನದ ಬ್ರಾಹ್ಮಣನು-''ನಾನು ಮತ್ತು ನನ್ನಲ್ಲಿ ಆವಾಹಿತವಾಗಿರುವ ಸರ್ವದೇವತೆಗಳೂ ಸಾವಧಾನವಾಗಿ ಉಪಚಾರ ಸ್ವೀಕರಿಸುತ್ತೇವೆ'' ಎನ್ನಬೇಕು.

ತತಃ ಪಿತೃ (ಮಾತೃ) ವಿಪ್ರಸ್ಯ ಪುರತಃ ದಕ್ಷಿಣಾಭಿಮುಖೋಪವಿಶ್ಯ । ಗಾಯತ್ರ್ಯಾ, ಅನ್ನಾದಿಕಂ ಪ್ರೋಕ್ಷ್ಯ ॥

ಪಿತೃಸ್ಥಾನದ ಬ್ರಾಹ್ಮಣನ ಮುಂದುಗಡೆ ದಕ್ಷಿಣಾಭಿಮುಖವಾಗಿ ಕುಳಿತು ಆ ಬ್ರಾಹ್ಮಣನ ಎಲೆಯ ಅನ್ನಾದಿಗಳನ್ನು ಗಾಯತ್ರಿಯಿಂದ ಪ್ರೋಕ್ಷಣೆ ಮಾಡುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ತೂಷ್ಣೀಂ ಅಪ್ರದಕ್ಷಿಣಂ ಪರಿಷಿಚ್ಯ ।

ಪಿತೃಸ್ಥಾನದ ಬ್ರಾಹ್ಮಣನ ಎಲೆಯನ್ನು ಮಂತ್ರವಿಲ್ಲದೆ ಕೂರ್ಚದಿಂದ ಅಪ್ರದಕ್ಷಿಣವಾಗಿ (ಬಲದಿಂದ ಎಡಕ್ಕೆ) ಪರಿಷೇಚಿಸುವುದು.

ಹಸ್ತೋದಕಂ ದತ್ವಾ ।

ಆ ಬ್ರಾಹ್ಮಣನಿಗೆ ಕೂರ್ಚದಿಂದ ಒಂದು ಸಲ ಹಸ್ತೋದಕ ಕೊಡುವುದು. ಎರಡು ಹಸ್ತಗಳಿಂದ ಭೋಜನಕ್ಕೆ ಬಡಿಸಿರುವ ಎಲೆಯ ಮುಂಭಾಗದ ಮಧ್ಯದ ಅಂಚನ್ನು ಹಿಡಿದುಕೊಳ್ಳುವುದು.

(ಎಲೆಯ ಕೆಳಭಾಗಕ್ಕೆ ಎಡ ಅಂಗೈತುದಿ, ಎಲೆಯ ಮೇಲುಭಾಗಕ್ಕೆ ಬಲ ಮುಂಗೈತುದಿ ಇಟ್ಟುಕೊಂಡು ಹಿಡಿದುಕೊಳ್ಳುವುದು.)

ಯಜ್ಞಂ ಪ್ರಸುವ ॥

ಪೃಥಿವೀ ತೇ ಪಾತ್ರಂ ದ್ಯೌರಪಿಧಾನಂ ಬ್ರಹ್ಮಣಸ್ತ್ವಾಮುಖೇ ಅಮೃತಂ ಜುಹೋಮಿ ಬ್ರಾಹ್ಮಣಾನಾಂ ತ್ವಾ ಪ್ರಾಣಾಪಾನಯೋರ್ಜುಹೋಮ್ಯಕ್ಷಿತಮಸಿ ಮೈಷಾಂ ಕ್ಷೇಷ್ಠಾ ಅಮುತ್ರಾಮುಷ್ಮಿನ್ ಲೋಕೇ ॥

ಹೀಗೆ ಎಲೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಈ ಮಂತ್ರದಿಂದ ಎಲೆಯನ್ನು ಅಭಿಮಂತ್ರಿಸುವುದು.

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್ । ಸಮೂಢಮಸ್ಯ ಪಾಗ್ಂ ಸುರೇ ॥

ಸ್ವಧಾ ವಿಷ್ಣೋ ಕವ್ಯಂ ರಕ್ಷಸ್ವ ॥

ಈ ಮಂತ್ರದಿಂದ ಪಿತೃಸ್ಥಾನದ ಬ್ರಾಹ್ಮಣನ ಬಲಗೈ ಹಿಡಿದುಕೊಂಡು ಎಲೆಯ ಅನ್ನಾದಿಗಳನ್ನು (ವಿಶ್ವೇದೇವರ ಸ್ಥಾನದ ಬ್ರಾಹ್ಮಣನಿಗೆ ಮಾಡಿದಂತೆ) ಆ ಬ್ರಾಹ್ಮಣನ ಹೆಬ್ಬೆರಳಿನಿಂದ ಮುಟ್ಟಿಸುವುದು.

ಪಿತೃ ಪಿತಾಮಹ ಪ್ರಪಿತಾಮಹಾಃ* (ಮಾತೃ ಪಿತಾಮಹಿ ಪ್ರಪಿತಾಮಹೀಃ) ........ ಗೋತ್ರಾಃ (ಗೋತ್ರಾಃ) । ........ ಶರ್ಮಾಣಃ (..... ದಾಯೀಃ) । ವಸು ರುದ್ರಾದಿತ್ಯರೂಪಾಃ (ವಸು ರುದ್ರಾದಿತ್ಯರೂಪಾ) । ದೇವಾ ದೇವತಾಃ । ಇದಮನ್ನಂ ಕವ್ಯಂ ಬ್ರಾಹ್ಮಣಸ್ತು ಆಹವನೀಯಾರ್ಥೇ ದತ್ತಂ ದಾಸ್ಯಮಾನಂ ಚ । ಆತೃಪ್ತೇರೇತತ್ಸರ್ವಂ ಗಯೇಯಂ ಭೂಃ । ಗದಾಧರೋ ಭೋಕ್ತಾ । ಅನ್ನಂ ಬ್ರಹ್ಮ । ಅಹಂ ಚ ಬ್ರಹ್ಮ । ಭೋಕ್ತಾ ಚ ಬ್ರಹ್ಮ । ಸರ್ವಂ ಖಲ್ವಿದಂ ಬ್ರಹ್ಮ । ಕಲ್ಪಿತ ರಜತಮಯ ಪಾತ್ರೇ ಸ್ಥಿತಮನ್ನಂ ಅಕ್ಷಯ ವಟವೃಕ್ಷಚ್ಛಾಯೇಯಂ । ಪಿತೃ ಪಿತಾಮಹ ಪ್ರಪಿತಾಮಹೇಭ್ಯಃ (ಮಾತೃ ಪಿತಾಮಹಿ ಪ್ರಪಿತಾಮಹೀಭ್ಯಃ) । ........ ಗೋತ್ರೇಭ್ಯಃ (...... ಗೋತ್ರಾಭ್ಯಃ) ರೂಪೇಭ್ಯಃ । (ವಸುರುದ್ರಾದಿತ್ಯರೂಪಾಭ್ಯಃ) ಇದಮಿದಮನ್ನಂ । ಅಮೃತ ಸ್ವರೂಪಂ । ಆತೃಪ್ತೇರ್ದಾಸ್ಯಮಾನಂ । ಅಕ್ಷಯ್ಯತೃಪ್ತ್ಯರ್ಥಂ, ಯಥಾಭಾಗಂ ಕವ್ಯಂ ಓಂ ತತ್ಸತ್ ॥

ಸ್ವಧಾ ನಮಮ । ನಮಮ ।

ಗಯಾಯಾಂ ಶ್ರೀ ರುದ್ರ ಪಾದಾದಿ ಸಮಸ್ತ ಪಾದೇಷು ಸಮಸ್ತ ತೀರ್ಥೇಷು ದತ್ತಮಸ್ತ್ವಿತಿ ಭವಂತೋ ಬ್ರುವಂತು । ಗದಾಧರಃ ಪ್ರೀಯತಾಮ್ ॥

ಈ ಮಂತ್ರಗಳನ್ನು ಹೇಳಿ, ದಕ್ಷಿಣೆ, ಎಳ್ಳು, ನೀರು ಸಮೇತ ಆತನ ಎಲೆಯ ಮುಂದೆ (ಪಿತೃಸ್ಥಾನದ ಬ್ರಾಹ್ಮಣನ ಎಲೆ ಮುಂದೆ) ಆ ಎಲೆಯನ್ನು ಎಡಗೈಲಿ ಮುಟ್ಟಿಕೊಂಡು, ಆತನ ಕೈಗೆ ಬಲಗೈನಿಂದ ''ಗದಾಧರ ಪ್ರೀತನಾಗಲಿ'' ಎಂದು ಹೇಳಿ ಬಿಡುವುದು.

ಗಯಾಯಾಂ ದತ್ತಂ ಅಸ್ತು । ಪ್ರೀಯತಾಂ ಗದಾಧರಃ ॥

ವಿಶ್ವೇದೇವ ಬ್ರಾಹ್ಮಣನು 'ಗದಾಧರ ಪ್ರೀತನಾಗುವನು' ಎನ್ನಬೇಕು.

---

* ವಸುಗಳು, ರುದ್ರರು, ಆದಿತ್ಯರು ಇವರು ಶ್ರಾದ್ಧದೇವತೆಗಳು. ಇವರೇ ಕ್ರಮವಾಗಿ ಪಿತೃ, ಪಿತಾಮಹ, ಪ್ರಪಿತಾಮಹ ಶಬ್ದವಾಚ್ಯರು. ಶ್ರಾದ್ಧ ಕರ್ತೃವಿನ ತಂದೆ ತಾಯಿಗಳು ತಮ್ಮ ಕರ್ಮಾನುಸಾರ, ಬಗೆ ಬಗೆಯ ಜನ್ಮವೆತ್ತಿದ್ದರೂ, ಶ್ರಾದ್ಧವು ಆಯಾ ದೇವತೆಗಳಿಗೆ ಅನುಗುಣವಾಗಿ ಆಹಾರ ರೂಪದಿಂದ ಅವರನ್ನು ಸೇರಿ ತೃಪ್ತಿಪಡಿಸುವುದು. ಅವರು ತೃಪ್ತರಾದರೆ, ಶ್ರಾದ್ಧ ಕರ್ತೃವಿಗೆ, ಧನಕನಕಾದಿಗಳು ಯಥೇಚ್ಛವಾಗಿ ಲಭಿಸುವುವು.

ಯೇ ಚೇಹ ಪಿತರೋ ಯೇ ಚ ನೇಹ ಯಾಗ್ಂಶ್ಚ ವಿದ್ಮಯಾಗ್ಂ ಉ ಚ ನ ಪ್ರವಿದ್ಮ । ತ್ವಂ ವೇತ್ಥ ಯದಿ ತೇ, ಜಾತವೇದ ಸ್ವಧಾಭಿರ್ಯಜ್ಞಂ ಸುಕೃತಂ ಜುಷಸ್ವ ॥

ಈ ಮಂತ್ರಗಳನ್ನು ಹೇಳಿ ಪಿತೃಗಳನ್ನು ಸಾವಧಾನವಾಗಿ ಭುಂಜಿಸಿರಿ ಎಂದು ಉಪಚರಿಸಬೇಕು.

(ಪಿತೃ ಪಿತಾಮಹ ಪ್ರಪಿತಾಮಹರಾದಿಯಾಗಿ ಸಮಸ್ತ ಪಿತೃಗಣಗಳಿಗೂ ತೃಪ್ತಿಯನ್ನು ಕೋರಬೇಕು.)

ಉಪವೀತಿ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಸಪ್ತವ್ಯಾಧಾ ದಶಾರ್ಣೇಷು ಮೃಗಾಃ ಕಾಲಾಂಜನೇ ಗಿರೌ ।
ಚಕ್ರವಾಕಾಶ್ಶರದ್ವೀಪೇ ಹಂಸಾಸ್ಸರಸಿ ಮಾನಸೇ ॥
ತೇಽಪಿ ಜಾತಾ ಕುರುಕ್ಷೇತ್ರೇ ಬ್ರಾಹ್ಮಣಾ ವೇದಪಾರಗಾಃ ।
ಪ್ರಸ್ಥಿತಾ ದೀರ್ಘಮಧ್ವಾನಂ ಯೂಯಂ ತೇಭ್ಯೋ ವಸೀದಥ ॥

ಜನಿವಾರ ಬಲದಲ್ಲೇ ಇಟ್ಟುಕೊಂಡು ಈ ಶ್ಲೋಕದಿಂದ ಅಕ್ಕಿಕಾಳು, ನಾಣ್ಯಗಳನ್ನು ಬಲ ಅಂಗೈಗೆ ಹಾಕಿಕೊಂಡು, ಕಲಶೋದಕವನ್ನು ಉದ್ಧರಣೆಯ ಮೂಲಕ ಎಡಗೈಯಲ್ಲಿ ತೆಗೆದುಕೊಂಡು, ಅಂಗೈಗೆ ಹಾಕಿಕೊಳ್ಳುತ್ತಾ (ವರದಹಸ್ತದಿಂದ) ಧಾರೆಯಾಗಿ ತರ್ಪಣ ಕೊಡಬೇಕು. ತರ್ಪಣದ ನೀರು ಹಿಡಿಯಲು ಒಂದು ಅರ್ಘ್ಯಪಾತ್ರೆ ಇಟ್ಟುಕೊಳ್ಳಬೇಕು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಅಮೂರ್ತಾನಾಂ ಚ ಮೂರ್ತಾನಾಂ ಪಿತೄಣಾಂ ದೀಪ್ತತೇಜಸಾಮ್ ।
ನಮಸ್ಯಾಮಿ ಸದಾ ತೇಷಾಂ ಧ್ಯಾಯಿನಾಂ ಯೋಗಚಕ್ಷುಷಾ ॥

ಈ ಮಂತ್ರದಿಂದ ಮೇಲ್ಕಂಡಂತೆ ಧಾರೆಯಾಗಿ ಎಳ್ಳುನೀರಿನಿಂದ ತರ್ಪಣ ಕೊಡುವುದು. (ಪಿತೃಗಳಿಗೆ ತರ್ಪಣ ಕೊಡುವ ರೀತಿಯಲ್ಲಿ).

ಸವ್ಯೇನ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಚತುರ್ಭಿಶ್ಚ ಚತುರ್ಭಿಶ್ಚ ದ್ವಾಭ್ಯಾಂ ಪಂಚಭಿರೇವ ಚ ।
ಹೂಯತೇ ಚ ಪುನರ್ದ್ವಾಭ್ಯಾಂ ಸ ಮೇ ವಿಷ್ಣುಃ ಪ್ರಸೀದತು ॥

ಆಶ್ರಾವಯ । ಅಸ್ತು ಶ್ರೌಷಟ್ । ಯಜ । ಯೇ ಯಜಾಮಹೇ । ವೌಷಟ್ ।

ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।

ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥

ಈ ಮಂತ್ರಗಳಿಂದ (ವರದ ಹಸ್ತದಿಂದ) ಧಾರೆಯಾಗಿ ಮೇಲ್ಕಂಡಂತೆ ಅಕ್ಕಿ ಕಾಳು ನೀರು ಬಿಡುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಯೇಷಾ (ಯಾಸಾ) ಮುದ್ದಿಷ್ಟಂ ತೇಷಾ (ತಾಸಾ) ಮಕ್ಷಯ್ಯ ತೃಪ್ತಿಃ ।

ಉದ್ದೇಶಿಸಿದ ಪಿತೃಗಳಿಗೆ ಅಕ್ಷಯ ತೃಪ್ತಿಯಾಗಲೆಂದು ಪಿತೃತೀರ್ಥದಲ್ಲಿ ಎಳ್ಳು ನೀರು ಬಿಡುವುದು.

ಅಸ್ತು ।

ಪಿತೃಸ್ಥಾನದ ಬ್ರಾಹ್ಮಣನು 'ತೃಪ್ತಿಯಾಯಿತು' ಎನ್ನಬೇಕು.

ಉಪವೀತಿ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ದೇವಾಶ್ಚ ಅಕ್ಷಯ ತುಷ್ಟಿಃ ।

ವರದಹಸ್ತದಿಂದ ವಿಶ್ವೇದೇವರುಗಳಿಗೆ ಅಕ್ಷಯತೃಪ್ತಿಯಾಗಲೆಂದು ಅಕ್ಕಿ ಕಾಳು, ನೀರು ಬಿಡುವುದು.

ಅಸ್ಮತ್ ಪಿತೃ, ಪಿತಾಮಹ, ಪ್ರಪಿತಾಮಹರೂಪೀ (ಅಸ್ಮನ್ಮಾತೃ, ಪಿತಾಮಹಿ, ಪ್ರಪಿತಾಮಹಿರೂಪೀ) ಶ್ರೀ ಜನಾರ್ದನಃ ಪ್ರೀಯತಾಂ ।

ಪಿತೃರೂಪಿಯಾದವ (ಮಾತೃರೂಪಿಯಾದ) ಜನಾರ್ದನನ ತೃಪ್ತಿಗಾಗಿ, ತಿಲೋದಕ ವನ್ನು ಜನಾರ್ದನನಿಗೆ ಕೊಡುವುದು.

ಪ್ರೀಯತಾಂ ಜನಾರ್ದನಃ ।

ಬ್ರಾಹ್ಮಣರುಗಳು 'ಜನಾರ್ದನ ಪ್ರೀತನಾದ' ಎನ್ನುವರು.

ಪ್ರಾಚೀನಾವೀತಿ । ದೇಶ, ಕಾಲ, ಮಂತ್ರ, ತಂತ್ರ, ಕರ್ತೃ, ಭೋಕ್ತೃ, ಹವಿರ್ದ್ರವ್ಯಾದಿಭ್ಯಃ ಸರ್ವಂ ನ್ಯೂನಾತಿರಿಕ್ತಾಭ್ಯಾಂ ಇದಂ ಕರ್ಮ ಅಚ್ಛಿದ್ರಮಸ್ತ್ವಿತಿ ಭವಂತೋ ಬ್ರುವಂತು ।

---

* ಬ್ರಹ್ಮರೂಪವಾಗಿ ಅಗ್ನಿಯಲ್ಲಿ ಯಜ್ಞಮಾಡುವುದೆಂದರೆ - ನಿರ್ಗುಣ ಬ್ರಹ್ಮದಲ್ಲಿ ಆತ್ಮಜ್ಞಾನ ದ್ವಾರ, ಏಕೀಭಾವದಿಂದ ನಿಲ್ಲುವಿಕೆ. ಮಹಾಕಾಶದಲ್ಲಿ ಘಟಾಕಾಶ ಸೇರುವಂತೆ - ಉಪಾಧಿತ್ಯಾಗದಿಂದ, ಬ್ರಹ್ಮದಲ್ಲಿ ವಿಲಯ ಹೊಂದುವುದು. ಉಪಾಧಿಯಿಂದ ಒಡಗೂಡಿದ ಆತ್ಮವನ್ನು ಯಾವ ಉಪಾಧಿಯೂ ಇಲ್ಲದ ಪರಬ್ರಹ್ಮರೂಪದಿಂದ ಕಾಣುವುದೇ - ಬ್ರಹ್ಮಾಗ್ನಿಯಲ್ಲಿ ಮಾಡುವ ಹೋಮ. ದ್ರವ್ಯಮಯ ಯಜ್ಞರೂಪವಾದ ಶ್ರಾದ್ಧಾದಿಗಳನ್ನು ಮಾಡಿ, ಕೊನೆಗೆ ಜ್ಞಾನ ಯಜ್ಞವನ್ನು ಮಾಡಿ, ಸಾಕ್ಷಾತ್ಕಾರ ಪಡೆಯಬೇಕು.

ಬ್ರಾಹ್ಮಣ ಭೋಜನ

ಜನಿವಾರವನ್ನು ಎಡಕ್ಕೆ ಹಾಕಿಕೊಂಡು ಅಕ್ಕಿ ಮತ್ತು ಎಳ್ಳು ಸೇರಿದ ನೀರು ಬಿಡು ವುದು.

ಸರ್ವಂ ನ್ಯೂನಾತಿರಿಕ್ತಾಭ್ಯಾಂ ಇದಂ ಕರ್ಮ ಅಚ್ಛಿದ್ರಮಸ್ತು ।

ಬ್ರಾಹ್ಮಣರು 'ಈ ನಿನ್ನ ಕರ್ಮದಲ್ಲಿ, 'ನ್ಯೂನಾತಿರಿಕ್ತಗಳು ಇಲ್ಲವಾಗಲಿ' ಎನ್ನಬೇಕು.

ಸವ್ಯಮ್ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಪ್ರಾಣಾನಾಯಮ್ಯ ।

ಪ್ರಾಣಾಯಾಮ ಮಾಡಿ.

ಓಂ ಓಂ ಓಂ ಅದ್ಯ ಮಯಾ ಪೂರ್ವೋಚ್ಚರಿತ ಏವಂಗುಣ ವಿಶೇಷಣ, ವಿಶಿಷ್ಟಾಯಾಂ ಪುಣ್ಯತಿಥೌ ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಅಸ್ಮತ್ ಪಿತುಃ ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧೇ । ಪಿತೃ, ಪಿತಾಮಹ, ಪ್ರಪಿತಾಮಹಾನ್...... ಗೋತ್ರಾನ್ ....... ಶರ್ಮಣಃ ವಸು ರುದ್ರಾದಿತ್ಯ ರೂಪಾನ್ । ಉದ್ದಿಶ್ಯ ।।

(ಅಸ್ಮನ್ಮಾತುಃ ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧೇ । ಮಾತೃ, ಪಿತಾಮಹಿ, ಪ್ರಪಿತಾಮಹೀಃ ..... ಗೋತ್ರಾಃ ...... ದೇವಿದಾಃ ವಸು ರುದ್ರಾದಿತ್ಯ ರೂಪಾಃ । ಏತಾಂ ಉದ್ದಿಶ್ಯ)

ಈ ಮಂತ್ರಗಳನ್ನು ಹೇಳಿ, ಎಲ್ಲಾ ಪಿತೃಗಳನ್ನೂ,

ಸವ್ಯಮ್ ।

ಜನಿವಾರ ಬಲಕ್ಕೆ ಹಾಕಿಕೊಂಡು

ಪುರೂರವಾರ್ದ್ರವ ಸಂಜ್ಞಕಾನ್ ವಿಶ್ವಾನ್ ದೇವಾನ್ ಉದ್ದಿಶ್ಯ, ಮಯಾ ಕ್ರಿಯಮಾಣೇನ ಅನೇನ ।

ಈ ರೀತಿ ಹೇಳಿ, ಎಲ್ಲಾ ವಿಶ್ವೇದೇವರುಗಳನ್ನೂ ಉದ್ದೇಶಿಸಿ,

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಂಡು

ಪಿತುಃ (ಮಾತುಃ) ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರದ್ಧೇನ ಪಿತೃ, ಪಿತಾಮಹ, ಪ್ರಪಿತಾಮಹಾನಾಂ ...... ಗೋತ್ರಾಣಾಂ (ಮಾತೃ, ಪಿತಾಮಹಿ, ಪ್ರಪಿತಾಮಹೀನಾಂ) (...... ಗೋತ್ರಾಣಾಂ) ..... ..... ..... ಶರ್ಮಣಾಂ ವಸು ರುದ್ರ ಆದಿತ್ಯ ರೂಪಾಣಾಂ (..... ..... ...... ದಾಯೀನಾಂ) ವಸು ರುದ್ರ ಆದಿತ್ಯ ರೂಪಾಣಾಂ ಏತೇಷಾಂ

(ಏತಾಸಾಂ) ಸರ್ವಂ ಸುಗುಣೇಭೂತ್ವಾ ಕೋಟಿಶಃ ಕೃತೇನ ಗಯಾನ್ನ ಶ್ರಾದ್ಧೇನೈವ ಅಕ್ಷಯತೃಪ್ತಿದ್ವಾರಾ ಪುನರಾವೃತ್ತಿರಹಿತ ಶಾಶ್ವತ ಬ್ರಹ್ಮಲೋಕಾವಾಪ್ತಿರಸ್ತ್ವಿತಿ ಭವಂತೋ ಬ್ರುವಂತು ।। ಇತಿ ತಿಲೋದಕಂ ಭೂಮೌ ವಿಸೃಜೇತ್ ।।

ಈ ರೀತಿ ಹೇಳಿಕೊಂಡು ಅವರೆಲ್ಲರ ತೃಪ್ತಿಗಾಗಿ, ಅಕ್ಕಿಕಾಳು, ಎಳ್ಳು, ದಕ್ಷಿಣೆ, ದರ್ಭೆಚೂರು, ಇವುಗಳನ್ನು ಹಿಡಿದುಕೊಂಡು ಕಲಶೋದಕವನ್ನು ಉದ್ಧರಣೆಯಿಂದ ಹಾಕಿಕೊಂಡು, ನೆಲದಮೇಲೆ ಬಿಡುವುದು.

ಪುನರಾವೃತ್ತಿರಹಿತ ಶಾಶ್ವತ ಬ್ರಹ್ಮಲೋಕಾವಾಪ್ತಿರಸ್ತು ।

ಬ್ರಾಹ್ಮಣರು 'ಪುನರಾವೃತ್ತಿ ಇಲ್ಲದ ಬ್ರಹ್ಮಲೋಕ ದೊರೆಯುತ್ತದೆ' ಎನ್ನಬೇಕು.

ಉಪವೀತಿ । ನಮೋ ದೇವೇಭ್ಯಃ । ವಿಶ್ವೇಭ್ಯೋ ದೇವೇಭ್ಯಃ ।

ಜನಿವಾರ ಬಲಕ್ಕೆ ಹಾಕಿಕೊಂಡು ದೇವರ ಎಲೆ ಬಳಿ, ಮಣೆಯ ಮೇಲೆ ಇಟ್ಟಿರುವ ಸಾಲಗ್ರಾಮಕ್ಕೆ ಅಥವ ಮನೆ ದೇವರ ಪಟಕ್ಕೆ, ಕೈ ಮುಗಿಯುವುದು, ಅನಂತರ, ವಿಶ್ವೇದೇವರ ಸ್ಥಾನದ ಬ್ರಾಹ್ಮಣನಿಗೆ ಕೈಮುಗಿಯುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

---

ಶ್ರಾದ್ಧದಲ್ಲಿ ಜನಾರ್ದನನೇ ಪಿತೃರೂಪಿಯಾಗಿರುವನು. ಆಗ ಪಿತೃಗಳಿಗೇ ಹೆಚ್ಚು ಪ್ರಾಮುಖ್ಯತೆ. ವಿಶ್ವೇದೇವತೆಗಳಿಗೆ ಪಿತೃಗಳು ವರವನ್ನು ಕೊಟ್ಟು, ಪ್ರಥಮದಲ್ಲಿ ಆ ವಿಶ್ವೇ ದೇವತೆಗಳನ್ನು ಆವಾಹಿಸಲು ಅನುಜ್ಞೆ ಮಾಡಿರುತ್ತಾರೆ. ಅಷ್ಟೆ. ಹೀಗಾಗಿ - ಪ್ರಥಮದಲ್ಲಿ ವಿಶ್ವೇದೇವರು, ಆಮೇಲೆ ದೇವರು, ಆಮೇಲೆ ಪಿತೃಗಳು, ಆಮೇಲೆ ಸುವಾಸಿನಿ - ಈ ಕ್ರಮದಲ್ಲಿ ಬಡಿಸಿರುವ ಎಲೆಗಳಿಗೆ ಪರಿಷೇಚನ ಮಾಡಬೇಕು.

ಆಮೇಲೆ ವಿಶ್ವೇದೇವರು, ಪಿತೃಗಳು, ಸುವಾಸಿನಿಯರಿಗೆ ಆಪೋಶನ ಹಾಕಬೇಕು. ನಂತರ, ದೇವರ ಎಲೆಗೆ ನಿವೇದನ ಮಾಡಬೇಕು. ದೇವರಿಗೆ ನಿವೇದನ ಆದಮೇಲೆ, ವಿಶ್ವೇದೇವರು, ಪಿತೃಗಳು ಆಪೋಶನ ತೆಗೆದುಕೊಂಡು ಭೋಜನ ಮಾಡುವರು.

ಮಾತಾ ಪಿತೃವರ್ಗಕ್ಕೆ ರೂಪಗಳನ್ನು ಹೇಳಿರುವ ಐತಿಹ್ಯವೇನೆಂದರೆ, ಬೃಹದಾರಣ್ಯಕ ಉಪನಿಷತ್ತಿನಂತೆ 'ವಸು' ಎಂದರೆ, ಅಷ್ಟ ಪ್ರಕೃತಿ ರೂಪ ಸ್ಥೂಲಶರೀರ (ಆ ಶರೀರ ಧರಿಸಿದ್ದ ನಮ್ಮ ಪಿತೃ, ಮಾತೃಗಳು - ಅಷ್ಟ ವಸುಗಳು).

'ರುದ್ರ ಎಂದರೆ, ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ ಮತ್ತು ಮನಸ್ಸಿನಿಂದ ಕೂಡಿದ 11 ಇಂದ್ರಿಯಗಳುಳ್ಳ, ಸ್ಥೂಲ ಶರೀರಕ್ಕೆ ಕಾರಣವಾದ ಸೂಕ್ಷ್ಮಶರೀರ (ಅಂದರೆ, ಪಿತೃಗಳಿಗೆ ಕಾರಣರಾದ ಪಿತಾಮಹ, ಪಿತಾಮಹಿಗಳು - ಏಕಾದಶ ರುದ್ರರು.) 'ಆದಿತ್ಯ' ಎಂದರೆ ಈ ಸೂಕ್ಷ್ಮಶರೀರಕ್ಕೆ ಕಾರಣವಾದ 'ಹನ್ನೆರಡು ಮಾಸಗಳುಳ್ಳ 'ಕಾಲ' ಮತ್ತು 'ಪ್ರಾಣಿಗಳು ಮಾಡಿದ ಕರ್ಮಗಳ ಫಲ, ಇವುಗಳಿಂದ ಚೋದಿತವಾದ 'ಕಾರಣ ಶರೀರ' (ಅಂದರೆ, ಪಿತಾಮಹ, ಪಿತಾಮಹಿಗಳಿಗೆ ಕಾರಣರಾದ ಪ್ರಪಿತಾಮಹ, ಪ್ರಪಿತಾಮಹಿಗಳು - ದ್ವಾದಶಾದಿತ್ಯರು.) ಇದು ಬುದ್ಧಿ ಅಹಂಕಾರ ಭೂತವಾದುದು. ಇವು ವಸು, ರುದ್ರ ಆದಿತ್ಯರುಗಳ ರೂಪಗಳು.

ಸ್ವಧಾ ಪಿತೃಭ್ಯಃ (ಮಾತೃಭ್ಯಃ) ।

ಪಿತೃಸ್ಥಾನದ ಬ್ರಾಹ್ಮಣನಿಗೆ ಕೈಮುಗಿಯುವುದು.

ಸವ್ಯೇನ ಉಭಯತೋ ದೇವೇಭ್ಯಃ ।

ಜನಿವಾರ ಬಲಕ್ಕೆ ಹಾಕಿಕೊಂಡು ದೇವ, ವಿಶ್ವೇದೇವ, ಈ ಉಭಯ ದೇವರಿಗೂ ಮತ್ತೊಮ್ಮೆ ಕೈಮುಗಿಯುವುದು.

ನಮಸ್ಸುವಾಸಿನ್ಯೈ ।

ಸುವಾಸಿನೀ ಮಾತೃಶ್ರಾದ್ಧದಲ್ಲಿ, ಮುತ್ತೈದೆಗೆ ನಮಸ್ಕಾರ ಮಾಡುವುದು. ಅರಿಶಿನ ಮಂತ್ರಾಕ್ಷತೆಯಿಂದ ಪೂಜಿಸಿ ದೀರ್ಘದಂಡ ನಮಸ್ಕಾರ ಮಾಡುವುದು. ಸುವಾಸಿನಿಗೆ, ಕರ್ತೃವಿನ ಹೆಂಡತಿ, ಕಾಲು ತೊಳೆದು, ಅರಶಿನ ಕುಂಕುಮ ಹೂವುಗಳನ್ನಿತ್ತು ಸತ್ಕರಿಸಬೇಕು.

ಮಧು ಶುದ್ಧ್ಯರ್ಥಂ ಮಧು ಸಂಸ್ಕಾರಾರ್ಥಂ ಮಧೂಸೂಕ್ತ ಮಂತ್ರಪಠನಂ ಕರಿಷ್ಯೇ । ಮಧು ಗಾಯತ್ರ್ಯಾ ಪ್ರೋಕ್ಷ್ಯ ।

ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ ಮಧುವಾಲೋಡ್ಯ ।

ಮಧುವಾತಾ ಋತಾಯತೇ । ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ । ಮಧುನಕ್ತಮುತೋಷಸಿ ಮಧುಮತ್ಪಾರ್ಥಿವಗ್ಂ ರಜಃ । ಮಧುದ್ಯೌರಸ್ತು ನಃ ಪಿತಾ ॥ ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ ಮಧು ಮಧು ಮಧು ॥ ಸರ್ವಂ ಮಧುವದಸ್ತು ॥

ಈ ಮಂತ್ರದಿಂದ, ಒಂದು ಸಣ್ಣ ದೊನ್ನೆಗೆ ಹಾಕಿಕೊಂಡಿರುವ ಜೇನುತುಪ್ಪವನ್ನು 'ಕೂರ್ಚ'ದಿಂದ ಪ್ರೋಕ್ಷಿಸಿ, ತೊಳಸಿ, ಆ ಮಧುವನ್ನು ಬ್ರಾಹ್ಮಣ ಸುವಾಸಿನಿಯರ ಎಲೆಗಳಿಗೆ ಬಡಿಸುವುದು.

(ಮೊದಲು ಪ್ರತಿ ಎಲೆಗೂ ಸುಲಿದ, ರಸಬಾಳೆಯ ಹಣ್ಣನ್ನು ಬಿಡಿಸಿ, ಅದರ ಮೇಲೆ ಜೇನುತುಪ್ಪ ಬಡಿಸುವುದು.)

ಪರಿಷೇಚನಾರ್ಥಂ ಉದಕಂ ದತ್ವಾ ।

ಬ್ರಾಹ್ಮಣರ ಪಾತ್ರೆಗಳಿಗೆ ಸ್ವಲ್ಪ ಕಲಶೋದಕವನ್ನು ಉದ್ಧರಣೆಯಿಂದ ಹಾಕುವುದು.

ಯಥಾ ಸೌಕರ್ಯಂ ಪರಿಷೇಚನಂ ।

ಬ್ರಾಹ್ಮಣರುಗಳನ್ನು ಪರಿಷೇಚನೆ ಮಾಡಿಕೊಳ್ಳಿರೆಂದು ಪ್ರಾರ್ಥಿಸುವುದು.

ದೇವಪಾತ್ರಂ ಪರಿಷೇಚನಂ ಕೃತ್ವಾ ।

ದೇವರ ಎಲೆಗೆ ಕೂರ್ಚದಿಂದ ಗಾಯತ್ರೀ ಮಂತ್ರೋಚ್ಚಾರಣೆ ಮೂಲಕ ಪರಿಷೇಚನ ಮಾಡುವುದು.

ಸುವಾಸಿನೀ ಶ್ರಾದ್ಧೇ ಸುವಾಸಿನೀ ಪಾತ್ರಂ ಪರಿಷೇಚನಂ ಕೃತ್ವಾ ।

ಸುವಾಸಿನೀ ಶ್ರಾದ್ಧವಾದರೆ ಆಗ ಸುವಾಸಿನಿ ಎಲೆಗೆ ಕೂರ್ಚದಿಂದ ಪರಿಷೇಚನ ಮಾಡುವುದು.

ಆಪೋಶನಂ ದತ್ವಾ ಸುವಾಸಿನೀ ಚ ।

ಉದ್ಧರಣೆಯಿಂದ ಕಲಶೋದಕವನ್ನು ತೆಗೆದುಕೊಂಡು ಪ್ರತಿಯೊಬ್ಬರಿಗೂ ಒಂದೊಂದು ಉದ್ಧರಣೆ ನೀರನ್ನು ಒಂಧು ಸಲ ಆಪೋಶನ ಹಾಕುವುದು. ಮೊದಲು ವಿಶ್ವೇದೇವ ಬ್ರಾಹ್ಮಣನಿಗೆ, ಆಮೇಲೆ ಪಿತೃಸ್ಥಾನದ ಬ್ರಾಹ್ಮಣನಿಗೆ, ಆಮೇಲೆ ಸುವಾಸಿನಿಗೆ ಈ ಕ್ರಮದಲ್ಲಿ ಆಪೋಶನ ಹಾಕಬೇಕು.

ದೇವ ಪಾತ್ರಂ ನಿವೇದನಂ ಕೃತ್ವಾ ದೇವಾಃ ಅಮೃತಮಸ್ತು ।

ದೇವರೆಲೆಯ ಪದಾರ್ಥಗಳನ್ನು ದೇವರಿಗೆ ನಿವೇದನ ಮಾಡುವುದು. 'ದೇವಾಃ ಅಮೃತಮಸ್ತು' ಎಂದು ಹೇಳಿ, ಒಂದು ಉದ್ಧರಣೆ ನೀರನ್ನು ನೆಲದ ಮೇಲೆ ಬಿಡುವುದು.

ನಿವೀತೀ ಭೂತ್ವಾ ।

ಆಮೇಲೆ, ಜನಿವಾರವನ್ನು ಹಾರದಂತೆ ನಿವೀತಿಯಾಗಿ ಹಾಕಿಕೊಳ್ಳುವುದು.

ಈಶಾನ ವಿಷ್ಣು ಕಮಲಾಸನ ಕಾರ್ತಿಕೇಯ ।
ವಹ್ನಿ ತ್ರಯಾರ್ಕ ರಜನೀಶ ಗಣೇಶ್ವರಾಣಾಂ ॥
ಕ್ರೌಂಚಾಮರೇಂದ್ರ ಕಲಶೋದ್ಭವ ಕಾಶ್ಯಪಾನಾಂ ।
ಪಾದಾನ್ನಮಾಮಿ ಸತತಂ ಪಿತೃ ಮುಕ್ತಿ ಹೇತೂಃ ॥

ಗಯಾಯಾಂ ಧರ್ಮಪೃಷ್ಠೇಷು ಸದಸಿ ಬ್ರಹ್ಮಣಸ್ಪತೇ ।
ಗಯಾಶೀರ್ಷೇ ವಟೇ ಚೈವ ಪಿತೄಣಾಂ ದತ್ತಮಕ್ಷಯಂ ॥

ಇಯಂ ಭೂಮಿರ್ಗಯಾ । ಏತೇ ಬ್ರಾಹ್ಮಣಾಃ ಗದಾಧರಾಃ । ಪಿತೃರೂಪೀ ಶ್ರೀ ಜನಾರ್ದನಃ ಪ್ರೀಯತಾಮ್ ॥

ಈ ಮಂತ್ರಗಳನ್ನು ಹೇಳಿಕೊಂಡು ಗಯಾಕ್ಷೇತ್ರದ ಶ್ರೀ ಜನಾರ್ದನನು ತೃಪ್ತನಾಗಲಿ ಎನ್ನುವುದು. ದೇವತಾ ಮತ್ತು ಪಿತೃಗಣಗಳಿಗೂ ಮತ್ತು ಪಿತೃರೂಪೀ ಜನಾರ್ದನನಿಗೂ ಕೈ ಮುಗಿಯುವುದು.

ಸ್ವಗೃಹೇ, ಸ್ವಕ್ಷೇತ್ರೇ, ಸಾಲಗ್ರಾಮ ಸನ್ನಿಧೌ । ಶ್ರೀ ಸೂರ್ಯನಾರಾಯಣ ಸನ್ನಿಧೌ । ಅಗ್ನಿದೇವತಾ ಸನ್ನಿಧೌ । ಯಜ್ಞೇಶ್ವರ ಸನ್ನಿಧೌ ॥

ಈ ಎಲ್ಲಾ ದೇವತಾಸಾನ್ನಿಧ್ಯದಲ್ಲಿ

ಸವ್ಯಮ್ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ದೇವಾಃ । ಅಮೃತಮಸ್ತು । ವಿಶ್ವೇದೇವಾಃ ಅಮೃತಮಸ್ತು ।

ವಿಶ್ವೇದೇವರ ಸ್ಥಾನದ ಬ್ರಾಹ್ಮಣನು ಆಪೋಶನ ತೆಗೆದುಕೊಳ್ಳಲು ಹೀಗೆಂದು ಹೇಳಿ, ಕೂರ್ಚದಿಂದ ನೆಲಕ್ಕೆ ನೀರು ಬಿಡುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಪಿತೃ, ಪಿತಾಮಹ, ಪ್ರಪಿತಾಮಹಾಃ । (ಮಾತೃ, ಪಿತಾಮಹಿ, ಪ್ರಪಿತಾಮಹ್ಯಃ) ಅಮೃತಮಸ್ತು ।

ಪಿತೃಸ್ಥಾನದ ಬ್ರಾಹ್ಮಣ ಆಪೋಶನ ತೆಗೆದುಕೊಳ್ಳಲು ಹೀಗೆಂದು ಹೇಳಿ ಕೂರ್ಚದಿಂದ ನೀರುಬಿಡುವುದು.

ಸವ್ಯಮ್ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಸುವಾಸಿನೀ । ಅಮೃತಮಸ್ತು ॥

ಸುವಾಸಿನಿಯು ಆಪೋಶನ ತೆಗೆದುಕೊಳ್ಳಲು ಕೂರ್ಚದಿಂದ ನೀರು ಬಿಡುವುದು.

ದೇವಾನಾಂ ಚ ವಿಶ್ವೇದೇವಾನಾಂ ಚ ಪಿತೄಣಾಂ ಚ ಸುವಾಸಿನ್ಯಾಶ್ಚ ಸರ್ವತ್ರ ಸಮಕಾಲೇ ಓಂ ತತ್ಸತ್ ಬ್ರಹ್ಮಾರ್ಪಣಮಸ್ತು ।

ಅಮೃತಮಸ್ತು ಅಮೃತೋಪಸ್ತರಣಮಸಿ ಸ್ವಾಹಾ ॥

ಈ ಮಂತ್ರ ಹೇಳುತ್ತಿರುವಾಗ ಬ್ರಾಹ್ಮಣ, ಸುವಾಸಿನಿಯರು ಆಪೋಶನವನ್ನು ತೆಗೆದುಕೊಳ್ಳಬೇಕು.

ಶ್ರದ್ಧಾಯಾಂ ಪ್ರಾಣೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾ ಪ್ರದಾಹಾಯ । ಪ್ರಾಣಾಯ ಸ್ವಾಹಾ ॥

ಶ್ರದ್ಧಾಯಾಮಪಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾ ಪ್ರದಾಹಾಯ । ಅಪಾನಾಯ ಸ್ವಾಹಾ ॥

ಶ್ರದ್ಧಾಯಾಂ ವ್ಯಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾ ಪ್ರದಾಹಾಯ । ವ್ಯಾನಾಯ ಸ್ವಾಹಾ ॥

ಶ್ರದ್ಧಾಯಾಮುದಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾ ಪ್ರದಾಹಾಯ । ಉದಾನಾಯ ಸ್ವಾಹಾ ॥

ಶ್ರದ್ಧಾಯಾಗ್ಂ ಸಮಾನೇ ನಿವಿಷ್ಟೋಽಮೃತಂ ಜುಹೋಮಿ । ಶಿವೋ ಮಾ ವಿಶಾ ಪ್ರದಾಹಾಯ । ಸಮಾನಾಯ ಸ್ವಾಹಾ ॥

ಸಚ್ಚಿದಾತ್ಮನೇ । ಬ್ರಹ್ಮಣೇ ಸ್ವಾಹಾ ॥

ಬ್ರಹ್ಮಣಿಮ ಆತ್ಮಾಽಮೃತತ್ವಾಯ । ಯಥಾಸುಖಂ ಜುಷಧ್ವಂ ।

ಈ ಸ್ವಾಹಾಕಾರ ಮಂತ್ರ ಹೇಳುತ್ತಾ ಬ್ರಾಹ್ಮಣ ರೂಪದಲ್ಲಿ ತನ್ನ ಪಿತೃಗಳೇ ಬಂದಿರುವರೆಂದು ಭಾವಿಸಬೇಕು. "ಪಿತಾ ಮೇ, ತವ ಕಾಯೇಽಸ್ಮಿನ್, ತಥಾ ಚೈವ ಪಿತಾಮಹಃ । ಸ್ವಪಿತ್ರಾ ಸಹಿತಾ ಹೇತು । ತ್ವಂ ಚ ವ್ರತಪರೋ ಭವ" ಅಂದರೆ 'ಪಿತೃಸ್ಥಾನದಲ್ಲಿರುವ ಬ್ರಾಹ್ಮಣನೇ - ನಿನ್ನ ಶರೀರದಲ್ಲಿ ನನ್ನ ಪಿತೃ ಪಿತಾಮಹ, ಪ್ರಪಿತಾಮಹರು, ಮಾತೃ, ಪಿತಾಮಹಿ ಪ್ರಪಿತಾಮಹಿಗಳು ಮತ್ತು ಎಲ್ಲಾ ಲೋಕ, ಲೌಕಿಕ ಪಿತೃಗಳೂ ಸನ್ನಿಹಿತರಾಗಿರಲಿ, ನೀನು ವ್ರತನಿಯಮನಾಗಿರು' ಎಂದು ಪ್ರಾರ್ಥಿಸಬೇಕು.

'ಶ್ರದ್ಧಾಯಾಂ......' ಈ ಮಂತ್ರಗಳನ್ನು ಹೇಳುವಾಗ, ಬ್ರಾಹ್ಮಣರು 5 ಸಾರಿ, 'ಚಿತ್ರಾಹುತಿ'ಗಳನ್ನು ತೆಗೆದುಕೊಳ್ಳಬೇಕು ಮತ್ತು 'ಬ್ರಹ್ಮಣೇ ಸ್ವಾಹಾ', ಎನ್ನುವಾಗಲೂ, ಇನ್ನೊಂದು ಸಾರಿ ಚಿತ್ರಾಹುತಿ ತೆಗೆದುಕೊಳ್ಳಬೇಕು. ಆಮೇಲೆ, ಕರ್ತೃವು, ಬ್ರಾಹ್ಮಣರನ್ನು ಕುರಿತು, 'ಯಥಾಸುಖವಾಗಿ ಭೋಜನಮಾಡಿ' ಎಂದು ಕೇಳಿಕೊಂಡು, ಉದ್ಧರಣೆಯಿಂದ ಬ್ರಾಹ್ಮಣರ ಎಡಗೈಗೆ, ಹಸ್ತೋದಕವನ್ನು ಹಾಕಬೇಕು.

ತಥಾ ಹಿ ।

ಬ್ರಾಹ್ಮಣರು 'ಸುಖವಾಗಿ ಭೋಜನ ಮಾಡುತ್ತೇವೆ' ಎನ್ನಬೇಕು.

ಸಂಪೂರ್ಣಂ ।
ಬ್ರಾಹ್ಮಣರು 'ನೀರು ಸಂದಿತು. ತೃಪ್ತಿಯಾಯಿತು' ಎನ್ನಬೇಕು.

ದಧ್ಯೋದನಂ ಪಾನೀಯಂ ।
ಕೊನೆಯಲ್ಲಿ ಅನ್ನ ಮೊಸರು ಬೇಕೆ ? ಎಂದು ಕೇಳಬೇಕು.

ಸಂಪೂರ್ಣಂ ।
ಬ್ರಾಹ್ಮಣರು 'ಆಯಿತು' ಎಂದು ಹೇಳಬೇಕು.

ತೃಪ್ತಾಸ್ಥ ।
ತೃಪ್ತಿಯಾಯಿತೇ ? ಎಂದು ಕರ್ತೃವು ಕೇಳಬೇಕು.

ತೃಪ್ತಾಸ್ಮಃ ।
ಬ್ರಾಹ್ಮಣರು 'ಸಂಪೂರ್ಣ ತೃಪ್ತಿಯಾಯಿತು' ಎನ್ನಬೇಕು.

ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ । ಮಧುನಕ್ತಮುತೋಷಸಿ ಮಧುಮತ್ಪಾರ್ಥಿವಗ್ಂ ರಜಃ । ಮಧುದ್ಯೌರಸ್ತು ನಃ ಪಿತಾ । ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥

ಈ ಮಂತ್ರವನ್ನು ಹೇಳುತ್ತಾ ಭೋಜನ ಪದಾರ್ಥಗಳೆಲ್ಲಾ ಮಧುರವಾಗಿತ್ತಲ್ಲವೇ ? ಎನ್ನಬೇಕು.

ಅಕ್ಷನ್ನಮೀಮದಂತಹ್ಯವ ಪ್ರಿಯಾ ಅಧೂಷತ । ಅಸ್ತೋಷತ ಸ್ವಭಾನವೋ ವಿಪ್ರಾನ ವಿಷ್ಠಯಾ ಮತೀ । ಯೋಜಾನ್ವಿಂದ್ರತೇ ಹರೀ ॥

ಬ್ರಾಹ್ಮಣರು "ಎಲ್ಲವೂ ಮಧುರವಾಗಿ, ಸುಸಂಪನ್ನವಾಗಿದ್ದವು" ಎನ್ನಬೇಕು.

ಪಾಚಿತ ಪದಾರ್ಥೇಷು ಯದಿಷ್ಟಂ ತದ್ಯಾಚ್ಯತಾಂ ಇತಿ ಪುನಃ ಪ್ರಾರ್ಥ್ಯ ॥
ಇಷ್ಟವಾದ ಪದಾರ್ಥಗಳನ್ನು ಕೇಳಿ ಬಡಿಸಿಕೊಳ್ಳಿ ಎನ್ನಬೇಕು.

ಉಪವೀತಿ ।
ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಪುರೂರವಾರ್ದ್ರವ ಸಂಜ್ಞಕಾ ವಿಶ್ವೇದೇವಾಃ । ತೃಪ್ತಾಸ್ಸ್ಥ । ತೃಪ್ತಾಸ್ಸ್ಥ ॥
ದೇವ, ವಿಶ್ವೇದೇವ ಇವರುಗಳನ್ನು ಆವಾಹಿಸಿರುವ ಬ್ರಾಹ್ಮಣನನ್ನು, ಈ ಇಬ್ಬರಿಗಾಗಿ ಎರಡು ಸಾರಿ 'ತೃಪ್ತಾಸ್ಥ' ಎಂದು ಕೇಳಬೇಕು.

ತೃಪ್ತಾಸ್ಥ: ।

ಅದಕ್ಕೆ ಆತನು 'ತೃಪ್ತಿಯಾಯಿತು' ಎನ್ನಬೇಕು.

**ಅಸೋಮಪಾಶ್ಚ ಯೇ ದೇವಾ ಯಜ್ಞಭಾಗ ವಿವರ್ಜಿತಾಃ । ತೇಷಾಮನ್ನಂ ಪ್ರದಾಸ್ಯಾಮಿ ವಿಕಿರಂ ವೈಶ್ವದೈವಿಕಂ ॥**

ಅಗ್ನೌಕರಣ ಕಾಲದಲ್ಲಿ ಮೇಕ್ಷಣದಲ್ಲಿ ಭಾಗ ಮಾಡಿ ನೈಋತ್ಯ ದಿಕ್ಕಿನಲ್ಲಿ ಇಟ್ಟಿದ್ದ ಅನ್ನವನ್ನು 'ವಿಕಿರ'ಕ್ಕಾಗಿ ಒಂದು ಸಣ್ಣ ದೊನ್ನೆಗೆ ಬಗ್ಗಿಸಿಕೊಂಡು ಸ್ವಲ್ಪ ಮೊಸರು ಹಾಕಿ ಕಲಸಿ (ವಿಕಿರವನ್ನಾಗಿ ಮಾಡಿಕೊಂಡು) ಆ ಮೊಸರನ್ನದಲ್ಲಿ ಸ್ವಲ್ಪವನ್ನು, ವಿಶ್ವೇದೇವರ ಸ್ಥಾನದ ಬ್ರಾಹ್ಮಣನು ಊಟಮಾಡಿದ ಎಲೆ ಮುಂದೆ ಎರಡು ಕಡೆ ಗುಪ್ಪೆ ಗುಪ್ಪೆಯಾಗಿ ಆತನ ಎಡದಿಂದ ಬಲಕ್ಕೆ "ಅಸೋಮಪಾಶ್ಚ....." ಎಂಬ ಈ ಮಂತ್ರವನ್ನು ಹೇಳಿಕೊಂಡು ಇಡುವುದು. ಮತ್ತು ದೊನ್ನೆಯಿಂದ ಇನ್ನೊಂದು ಸ್ವಲ್ಪ ಮೊಸರನ್ನವನ್ನು ತೆಗೆದುಕೊಂಡು, ಈ ಗುಪ್ಪೆಗಳ ಮುಂದೆ ಆತನ ಎಡದಿಂದ ಬಲಕ್ಕೆ ಉದ್ದಕ್ಕೂ ಎಲೆ ಕೊನೆಯವರೆವಿಗೆ ಉದುರಿಸುವುದು.

(ಈ ವಿಕಿರವು ಯಜ್ಞಭಾಗ ವಿವರ್ಜಿತರಾದ ಅಸೋಮಪರೆಂಬುವವರಿಗೆ ತೃಪ್ತಿಯನ್ನುಂಟುಮಾಡುವುದು).

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳುವುದು.

ಪಿತೃ, ಪಿತಾಮಹ, ಪ್ರಪಿತಾಮಹಾಃ (ಮಾತೃ, ಪಿತಾಮಹಿ, ಪ್ರಪಿತಾಮಹ್ಯಃ) ತೃಪ್ತಾಸ್ಸ್ಥ ತೃಪ್ತಾಸ್ಸ್ಥ ತೃಪ್ತಾಸ್ಸ್ಥ ॥

ಮೂರು ಪಿತೃಗಳಿಗೂ ತೃಪ್ತಿಯಾಯಿತೇ ? ಎಂದು 3 ಸಾರಿ, ಪಿತೃಗಳನ್ನು ಆವಾಹಿಸಿರುವ ಬ್ರಾಹ್ಮಣನನ್ನು ಕೇಳಬೇಕು.

ಮೂರು ಸಾರಿ 'ತೃಪ್ತಾಸ್ಥ' ಎನ್ನಬೇಕು.

---

**ವಿಶೇಷ ವಿಷಯ :-**

"ಕುತಪ" ಕಾಲಃ - "ತತೋ ಮಧ್ಯಂ ಗತೇ ಸೂರ್ಯೇ । ಕಾಲೇ ಕುತಪ ಸಂಜ್ಞಕೇ" । (ಸ್ಕಾಂದ) ಎಂದು ಕುತಪ ಕಾಲದಲ್ಲಿ ಶ್ರಾದ್ಧಾಚರಣೆಯನ್ನು ಹೇಳಿದೆ.

ಪುಟ 77ರಲ್ಲಿರುವ 'ಚತುರ್ಭಿಶ್ಚ........ವೌಷಟ್' ವರೆಗಿನ ಮಂತ್ರವು ಕುತಪ ಕಾಲದ ಘಳಿಗೆಯನ್ನು ಹೋಮ ಮಂತ್ರಗಳ ಅಕ್ಷರ ಸಂಖ್ಯೆಯಿಂದ ತಿಳಿಸಿದೆ.

'ಆಶ್ರಾವಯ' - 4, 'ಅಸ್ತು ಶ್ರೌಷಟ್' - 4, 'ಯಜ' - 2, 'ಏ ಯಜಾಮಹೇ' - 5, 'ವೌಷಟ್' - 2, ಒಟ್ಟು 17. ಈ 17 ಎಂಬ ಸಂಖ್ಯೆಯು, ಸೂರ್ಯೋದಯಾನಂತರ 16 ಘಳಿಗೆಗಳು ಅಂದರೆ 6 ಘಂಟೆ 24 ನಿಮಿಷಗಳು ಕಳೆದು, 17ನೇ ಘಳಿಗೆ ಪ್ರಾರಂಭವನ್ನು ಸೂಚಿಸುತ್ತದೆ. ಇದೇ "ಕುತಪ' ಕಾಲ. ಇದು ಸುಮಾರು, ಮಧ್ಯಾಹ್ನ 12 ಘಂಟೆ 30 ನಿಮಿಷ ತೋರಿಸುತ್ತದೆ. ಈ ಕಾಲವು ಶ್ರಾದ್ಧಾಚರಣೆಗೆ ಸಂಕಲ್ಪ ಮಾಡುವುದಕ್ಕೆ ಸೂಕ್ತ.

**ತೃಪ್ತಾಸ್ಥ: ।**

ಅದಕ್ಕೆ ಪಿತೃಸ್ಥಾನದ ಬ್ರಾಹ್ಮಣನು 'ತೃಪ್ತಿಯಾಯಿತು' ಎನ್ನಬೇಕು.

**ಅಸಂಸ್ಕೃತ ಪ್ರಮೀತಾಯೇ ತ್ಯಾಗಿನ್ಯೋಯಾಃ ಕುಲಸ್ತ್ರಿಯಃ । ದಾಸ್ಯಾಮಿ ತೇಭ್ಯೋ ವಿಕಿರಮನ್ನಂ ತಾಭ್ಯಶ್ಚ ಪೈತೃಕಂ ।।**

ದೊನ್ನೆಯಲ್ಲಿ ಉಳಿದ ಮೊಸರನ್ನದಲ್ಲಿ ಮೂವರು ಪಿತೃಗಳ ತೃಪ್ತಿಗಾಗಿ ಸ್ವಲ್ಪವನ್ನು ಪಿತೃಸ್ಥಾನದ ಬ್ರಾಹ್ಮಣನ ಎಲೆ ಮುಂದೆ ಈ ಮಂತ್ರವನ್ನು ಹೇಳುತ್ತಾ ಮೂರು ಕಡೆ ಗುಪ್ಪೆ ಗುಪ್ಪೆಯಾಗಿ, ಬ್ರಾಹ್ಮಣನ ಬಲದಿಂದ ಎಡಕ್ಕೆ ಇಡಬೇಕು. ಉಳಿದ ದೊನ್ನೆಯ ಎಲ್ಲಾ ಮೊಸರನ್ನವನ್ನೂ, ಎಲೆಯ ಮುಂದೆ, ಬ್ರಾಹ್ಮಣನ ಎಡಕ್ಕೆ ಉದುರಿಸಿ ಕೊನೆಯಲ್ಲಿ ಆ ದೊನ್ನೆಯನ್ನು ಬೋರಲು ಹಾಕುವುದು. (ಈ ವಿಕಿರ, ಊಟವಾದ ಎಲೆಗೆ ತಗಲದಂತೆ ಇರಬೇಕು - ಎಂಜಲಿಗೆ ಬೆರೆಯಬಾರದು).

**ಅಪ ಉಪಸ್ಪೃಶ್ಯ ।**

ಆಮೇಲೆ ಕಲಶೋದಕದ ನೀರಿನಿಂದ ಉದ್ಧರಣೆಯಿಲ್ಲಿ ನೀರು ತೆಗೆದುಕೊಂಡು ಕೈ ತೊಳೆದುಕೊಳ್ಳುವುದು.

**ದೇವಪಿತ್ರೋರ್ಮಧ್ಯೇ ಭೂಮಿಂ ಪ್ರೋಕ್ಷ್ಯ ।**

ವಿಶ್ವೇದೇವ ಬ್ರಾಹ್ಮಣನ ಮತ್ತು ಪಿತೃ ಸ್ಥಾನದ ಬ್ರಾಹ್ಮಣನ ಎಲೆಗಳ ಮಧ್ಯೆ ಭೂಮಿಯನ್ನು ಕೂರ್ಚದಿಂದ ಪ್ರೋಕ್ಷಿಸುವುದು.

**ತತ್ರ ತಿಲ ದರ್ಭಾನಾಸ್ತೀರ್ಯ ।**

ಪ್ರೋಕ್ಷಿಸಿದ ಜಾಗದಲ್ಲಿ 3 ತುಂಡು ದರ್ಭೆ, ಎಳ್ಳುಗಳನ್ನು ಇಡುವುದು.

**ವಿಶೇಷ ಸೂಚನೆ :**

(ಈ ಸಮಯದಲ್ಲಿ ಪಿಂಡಪ್ರದಾನಕ್ಕಾಗಿ ಒಂದು ಹಿತ್ತಾಳೆ ಅರಕಿನ ಚಟ್ಟಿಗೆ ಅನ್ನ-ಪಾಯಸ-ಮೊಸರು-ಹಾಲು-ಮಧು-ಎಳ್ಳು-ತೊವ್ವೆ ಇವುಗಳನ್ನು ಹಾಕುವುದು.)

ಅಗ್ನೌಕರಣ ಕಾಲದಲ್ಲಿ ಮೇಕ್ಷಣದಲ್ಲಿ ಭಾಗ ಮಾಡಿದ್ದ ಆಗ್ನೇಯ ದಿಕ್ಕಿನ ಅನ್ನಕ್ಕೆ ಎಳ್ಳು ಬೆರಸಿ ಅರಕಿನಚಟ್ಟಿಗೆ ಬಗ್ಗಿಸಿಕೊಳ್ಳುವುದು. ಅರಕಿನಚಟ್ಟಿಯ ಅನ್ನಾದಿಗಳಿಗೆ ಸ್ವಲ್ಪ ಕಲಶೋದಕವನ್ನು ಹಾಕಿ, ಚೆನ್ನಾಗಿ ಅಮುಕಿ, ಕಲಸಿ, ಉಚ್ಛಿಷ್ಟ ಪಿಂಡಕ್ಕಾಗಿ, ಒಂದು ಸಣ್ಣ ಉಂಡೆಯನ್ನು ಕಟ್ಟಿ, ಉಳಿದ ಅನ್ನದಿಂದ ಸಮನಾದ 3 ದಪ್ಪ ಪಿಂಡಗಳನ್ನು ದುಂಡಗೆ ಚೆಂಡಿನಂತೆ ಕಟ್ಟಿ, ಆ ಅರಕಿನಚಟ್ಟಿಯಲ್ಲಿ ಇರಿಸುವುದು. ಉಚ್ಛಿಷ್ಟ ಪಿಂಡವು ಕುಕ್ಕುಟಾಂಡ ಪ್ರಮಾಣದಲ್ಲಿಯೂ, ಉಳಿದ ಪಿಂಡಗಳು ಮಯೂರಾಂಡ ಪ್ರಮಾಣದಲ್ಲಿಯೂ ಇರಬೇಕು.

ಸಣ್ಣಗೆ ಕಟ್ಟಿದ ಒಂದು ಉಂಡೆಯನ್ನು ಒಂದು ಸಣ್ಣ ದೊನ್ನೆಯಲ್ಲಿ ಹಾಕಿ ಇರಿಸುವುದು. ಪಿಂಡಗಳು ಒಡೆಯದಂತೆ ಚೆನ್ನಾಗಿ ಅಮುಕಿ ದುಂಡಾಗಿ ಕಟ್ಟಬೇಕು.

(ಪಿಂಡಪ್ರದಾನಕ್ಕೆ ಅರಕಿನ ಚಿಟ್ಟೆಯಲ್ಲಿ ಅನ್ನವನ್ನು ಮೊದಲು ತೆಗೆದುಕೊಂಡು, ಬ್ರಾಹ್ಮಣರಿಗೆ ಮಜ್ಜಿಗೆ ಅನ್ನಕ್ಕಾಗಿ ಸ್ವಲ್ಪ ಬಡಿಸಿ, ಆಮೇಲೆ ಬಾಕಿ ಅನ್ನಕ್ಕೆ ಪಾಯಸ, ಹಾಲು ಮುಂತಾದವುಗಳನ್ನು ಹಾಕಿಕೊಳ್ಳಬೇಕು).

ಉಚ್ಛಿಷ್ಟ ಪಿಂಡಮಾದಾಯ ।

ದೊನ್ನೆಯಲ್ಲಿ ಇಟ್ಟುಕೊಂಡಿರುವ ಉಚ್ಛಿಷ್ಟ ಪಿಂಡವನ್ನು ಬಲಗೈಗೆ ತೆಗೆದು ಕೊಳ್ಳುವುದು.

ಯೇ ಅಗ್ನಿದಗ್ಧಾ ಯೇಽನಗ್ನಿದಗ್ಧಾಃ । ಯೇ ವಾ ಜಾತಾಃ ಕುಲೇ ಮಮ ।

ಭೂಮೌ ದತ್ತೇನ ಪಿಂಡೇನ । ತೃಪ್ತಾ ಯಾಂತು ಪರಾಂ ಗತಿಮ್ ॥

ಅಗ್ನಿದಗ್ಧೇಭ್ಯಃ, ಅನಗ್ನಿದಗ್ಧೇಭ್ಯಃ ಅಸ್ಮತ್ಕುಲಪ್ರಸೂತ ಮೃತೇಭ್ಯಃ ಅಯಂ ಪಿಂಡ ಸ್ವಧಾ ನಮಃ ॥

---

ವಿಶೇಷ ವಿಷಯ :

ಪುಟ 77ರಲ್ಲಿರುವ 'ಸಪ್ತವ್ಯಾಧಾ......' ಎಂಬ ಮಂತ್ರದಲ್ಲಿ ಶ್ರಾದ್ಧಾಚರಣೆ ಮಹಿಮೆ ಇದೆ. ಈ ಮಂತ್ರದ ಅರ್ಥ ಮತ್ತು ಕಥೆ ಈ ಕೆಳಗೆ ಕಂಡಂತೆ ಇದೆ.

ಇದರ ಅರ್ಥ :- ''ದಶಾರ್ಣದೇಶದಲ್ಲಿ 7 ವ್ಯಾಧರು, ಕಾಲಾಂಜನ ಪರ್ವತದಲ್ಲಿ 7 ಮೃಗಗಳು, ಶರದ್ವೀಪದಲ್ಲಿ 7 ಚಕ್ರವಾಕ ಪಕ್ಷಿಗಳು, ಮಾನಸ ಸರೋವರದಲ್ಲಿ 7 ಹಂಸಗಳು, ಆ.ನಾವೇ ಕುರುಕ್ಷೇತ್ರದಲ್ಲಿ ವೇದಪಾರಂಗತ ಬ್ರಾಹ್ಮಣರಾಗಿ ಜನಿಸಿ ಮಹಾಪ್ರಸ್ಥಾನ ಹೊರಟಿದ್ದೇವೆ. ನೀವೇಕೆ ಉಳಿಯುವಿರಿ'' ? ಎಂದು ಇದರ ಕಥೆ -ಗಾರ್ಗ್ಯ ಮಹರ್ಷಿಯ ಹತ್ತಿರ 7 ಮಂದಿ ವಿಶ್ವಾಮಿತ್ರನ ಪುತ್ರರು ವಿದ್ಯಾರ್ಥಿಗಳಾಗಿದ್ದರು. ಗುರುವಿನ ಅಪ್ಪಣೆಯಂತೆ ಗುರುವಿಗೆ ದಾನ ಬಂದ ಆಕಳನ್ನು ಅವರು, ಅದರ ಕರುವಿನೊಡನೆ ಹುಲ್ಲುಮೇಯಿಸಲು ಕಾಡಿಗೆ ತೆಗೆದುಕೊಂಡು ಹೋದರು. ಅವರಿಗೆ ಆ ಗೋವನ್ನು ಕೊಂದು ತಿನ್ನಬೇಕೆಂಬ ದುರ್ಬುದ್ಧಿ ಹುಟ್ಟಿತು. ಅವರಲ್ಲಿ ಒಬ್ಬನಾದ 'ಪಿತೃವರ್ತಿ'ಯು ಶ್ರಾದ್ಧ ಮತ್ತು ಆಹ್ನಿಕ ತತ್ಪರನಾಗಿದ್ದನು. ಅವನು 'ಈ ಗೋವನ್ನು ತಿನ್ನಲೇಬೇಕೆಂದರೆ, ಶ್ರಾದ್ಧಕರ್ಮದಿಂದ ಪಿತೃಗಳನ್ನು ಆರಾಧಿಸಿ ಗೋವನ್ನು ಪ್ರೋಕ್ಷಿಸಿ ಪಿತೃಗಳಿಗೆ ಪಿಂಡಕ್ಕಾಗಿ ಅರ್ಪಿಸಿ, ಭಕ್ಷಿಸೋಣ. ಈ ಗೋವಿಗೂ ಧರ್ಮ ಬರುತ್ತದೆ. ನಮಗೂ ಅಧರ್ಮ ಬರುವುದಿಲ್ಲ' ಎಂದನು. ಅವರು ಹಾಗೆಯೇ ಮಾಡಿದರು. ಈ 7 ಜನರೂ ತಮ್ಮ ಕ್ರೌರ್ಯದಿಂದಲೂ, ಗೋಹತ್ಯ, ಗುರುದ್ರೋಹಾದಿ ಪಾತಕಗಳನ್ನು ಮಾಡಿದ್ದರಿಂದಲೂ ಅನೇಕ ಅಧಮ ಜನ್ಮಗಳನ್ನು ಪಡೆದರು. ಇಷ್ಟು ಹೀನಕೃತ್ಯವೆಸಗಿದರೂ ಪಿತೃ ಶ್ರಾದ್ಧಮಾಡಿದ್ದರಿಂದ ಕೊನೆಗೆ ಸದ್ಗತಿಯನ್ನು ಪಡೆದರು. ಬ್ರಾಹ್ಮಣ ಜನ್ಮ ಬಂದಾಗ 7 ಜನರಲ್ಲಿ ಇಬ್ಬರು ಕಾಂಪಿಲ್ಯ ಪಟ್ಟಣದಲ್ಲಿ ರಾಜ ಮತ್ತು ಮಂತ್ರಿಗಳಾದರು. ಅವರು ವಿಷಯಲಂಪಟರಾಗಿ ತಮ್ಮ ಪೂರ್ವಸ್ಮರಣೆಯನ್ನು ಮರೆತರು. ಉಳಿದ 5 ಜನಗಳು ಯೋಗದ ಗತಿಯನ್ನು ಹೊಂದು ಮಹಾ ಪ್ರಸ್ಥಾನ ಹೊರಟರು. ಈ 5 ಜನಗಳು ತಾವು ಹೊರಡುವಾಗ ತಮ್ಮ ತಂದೆಗೆ ಮೇಲ್ಕಂಡ ಶ್ಲೋಕವನ್ನು ರಾಜ ಮತ್ತು ಮಂತ್ರಿಗಳೆದುರಿಗೆ ಹೇಳುವಂತೆ ಕೇಳಿಕೊಂಡರು. ಅವನು ಅದರಂತೆ ಹೇಳಲು, ಆ ರಾಜ ಮತ್ತು ಮಂತ್ರಿಗಳಿಗೆ ಪೂರ್ವಸ್ಮರಣೆ ಬಂದು, ತಾವು ಹಿಂದುಳಿಯಬಾರದೆಂದು ಮಿಕ್ಕ ಐದು ಜನರೊಡನೆ ತಾವೂ ಮಹಾಪ್ರಸ್ಥಾನ ಹೊರಟು ಸಿದ್ಧಿ ಪಡೆದರು.

ಈ ಉಚ್ಛಿಷ್ಟ ಪಿಂಡವನ್ನು, ಈ ಮಂತ್ರ ಹೇಳುತ್ತಾ ದರ್ಭೆಯ ಮೇಲೆ (ತರ್ಪಣ ಕೊಡುವ ರೀತಿಯಲ್ಲಿ) ಇಡುವುದು. (ಶ್ರಾದ್ಧ ಕರ್ತೃವಿನ ವಂಶಜರಾಗಿ ಔರ್ಧ್ವ ದೈಹಿಕ ಕ್ರಿಯೆಗಳಿಲ್ಲದ (ಅನಗ್ನಿದಗ್ಧರು) ಸುಡದೆ ಹೂತುಬಿಟ್ಟ ಸಣ್ಣ ಮಕ್ಕಳುಗಳಿಗೆ ಮತ್ತು ಅಗ್ನಿದಗ್ಧರಾದರೂ ಕಾರಣಾಂತರದಿಂದ ಶ್ರಾದ್ಧಾದಿಗಳು ನಡೆಯದೆ ಬಿಟ್ಟು ಹೋದವರಿಗೆ, ಈ ಪಿಂಡದಿಂದ ತೃಪ್ತಿ. ಅಂದರೆ ಮಂತ್ರಪೂತ ಅಗ್ನಿಯಿಂದ ಔರ್ಧ್ವದೇಹಿಕ ಕ್ರಿಯೆಗಳಾದರೂ (ಅಗ್ನಿದಗ್ಧರೆನಿಸಿದರೂ) ಶ್ರಾದ್ಧ ಮಾಡುವವರಿಲ್ಲದೆ ಬಿಟ್ಟುಹೋದಂತಹವರಿಗೆ ತೃಪ್ತಿ).

ಅಗ್ನಿದಗ್ಧಾಶ್ಚ, ಅನಗ್ನಿದಗ್ಧಾಶ್ಚ, ಮಾರ್ಜಯಂತಾಂ । ಏತದ್ವಸ್ತಿಲೋದಕಮ್ ॥

ಈ ಪಿಂಡದ ಮೇಲೆ ಎಳ್ಳು ನೀರು ಬಿಡುವುದು (ತರ್ಪಣ ಕೊಡುವ ರೀತಿಯಲ್ಲಿ).

• ಉಪವೀತೀ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಉಚ್ಛಿಷ್ಟ ಪಿಂಡಂ ವಿಸೃಜ್ಯ ।

ಪಿಂಡಂ ವಾಯಸೇಭ್ಯೋ ದತ್ವಾ । ಪಾದೌ ಪ್ರಕ್ಷಾಳ್ಯ । ಆಚಮ್ಯ । ಪವಿತ್ರಂ ವಿಸೃಜ್ಯ । ಪುನಃ ಪವಿತ್ರಂ ಧೃತ್ವಾ ।

ಈ ಪಿಂಡವನ್ನು ಎತ್ತಿ ದೊನ್ನೆಗೆ ಹಾಕಿಕೊಂಡು, ಕಾಗೆಗಳಿಗೆ ಮಾತ್ರ ಆಹಾರವಾಗಲು ಅನುಕೂಲಿಸುವಂತೆ, ಅವು ಹಾರಿಬಂದು ತಿನ್ನಲು ಅನುಕೂಲವಾದ ಎತ್ತರವಾದ ಸ್ಥಳದಲ್ಲಿ ಹೊರಗಡೆ ಇಡಬೇಕು.

ಆಮೇಲೆ ಪಾದ ಪ್ರಕ್ಷಾಳನೆ ಮಾಡಿಕೊಂಡು ಆಚಮನ ಮಾಡಿ, ಪವಿತ್ರವನ್ನು ಬಿಚ್ಚಿ ಹಾಕಿ, ಪುನಃ 3 ದರ್ಭೆಯ ಬೇರೆ ಪವಿತ್ರ ಧರಿಸುವುದು.

ಭವದ್ಭಿಃ ಉಚ್ಛಿಷ್ಟ ಭಾಗ್ಭ್ಯೋಽನ್ನಂ ದೀಯತಾಮ್ ।

ಈ ಮಂತ್ರದಿಂದ ವಿಪ್ರರನ್ನು ಪ್ರಾರ್ಥಿಸಿ ಅವರು ಊಟ ಮಾಡಿದ ಮೇಲೆ ಉಳಿದ, ಚೆಲ್ಲಿದ ಭಾಗವನ್ನು ಎಲೆಯ ಹೊರಗೆ ಒಂದು ಕಡೆ ಇಡಲು ಕೇಳಿಕೊಳ್ಳುವುದು.

ಯಜಮಾನ ಕುಲೇ ಜಾತಾ ದಾಸಾ ದಾಸ್ಯೋಽನ್ನಕಾಂಕ್ಷಿಣಃ ।

ತೇ ಸರ್ವೇ ತೃಪ್ತಿಮಾಯಾಂತು । ಮಯಾ ದತ್ತೇನ ಭೂತಲೇ ॥

(ಇತಿ, ದೈವಿಕಂ ದಕ್ಷಿಣೇ, ಪೈತೃಕಂ ವಾಮೇ, ಉಚ್ಛಿಷ್ಟ ಶೇಷಂ, ಭೋಕ್ತಾರಃ ಬಹಿಷ್ಕುರ್ಯುಃ) ।

ವಿಶ್ವೇದೇವರ ಸ್ಥಾನದ ಬ್ರಾಹ್ಮಣನು ಎಲೆಯ ಬಲಗಡೆಗೂ ಪಿತೃಸ್ಥಾನದ ಬ್ರಾಹ್ಮಣರು ಎಲೆಯ ಎಡಗಡೆಗೂ ಎಲೆಯ ಹೊರಗಡೆ ಉಚ್ಛಿಷ್ಟ ಅನ್ನವನ್ನು ಇಡುವುದು.

(ಕರ್ತೃವಿನ ವಂಶದಲ್ಲಿ ಹುಟ್ಟಿ ಅವನ ಸೇವಾವೃತ್ತಿಯಲ್ಲಿದ್ದು, ಮರಣ ಹೊಂದಿ ಅನ್ನಾಕಾಂಕ್ಷಿಗಳಾಗಿರುವವರಿಗೆ ಈ ಉಚ್ಛಿಷ್ಟ ಭಾಗವು ತೃಪ್ತಿಯನ್ನುಂಟು ಮಾಡುವುದು).

ಪ್ರಾಣಾನಾಯಮ್ಯ । ಓಂ ಓಂ ಓಂ ಅದ್ಯ ಮಯಾ ಪೂರ್ವೋಚ್ಚರಿತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ।

ಈ ರೀತಿ ಪ್ರಾಣಾಯಾಮ ಮಾಡಿ.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಮಮ ಪಿತುಃ (ಮಮ ಮಾತುಃ) ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧೀಯ (ಬ್ರಾಹ್ಮಣ ಭೋಜನಾನಂತರಂ) ತಿಲೋದಕ ಪಿಂಡಪ್ರದಾನಾನಿ ಕರಿಷ್ಯೇ ॥

ಬ್ರಾಹ್ಮಣ ಭೋಜನಾ ನಂತರ "ಇನ್ನು ತಿಲೋದಕ ಪಿಂಡಪ್ರದಾನಗಳನ್ನು ಆಚರಿಸುತ್ತೇನೆ" ಎನ್ನಬೇಕು.

ಕುರುಷ್ವ ।

ಅದಕ್ಕೆ ಬ್ರಾಹ್ಮಣರು 'ಹಾಗೆ ಮಾಡು' ಎನ್ನಬೇಕು.

ಸವ್ಯೇನ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಪಿತೃಪೂರ್ವಕಂ ಉತ್ತರಾಪೋಶನಂ ದತ್ವಾ । ಅಮೃತಾಪಿಧಾನಮಸಿ ।

ಪಿತೃ/ಮಾತೃ ಸ್ಥಾನದ ವಿಪ್ರನಿಗೆ ಮೊದಲು, ಆಮೇಲೆ ವಿಶ್ವೇದೇವ ವಿಪ್ರನಿಗೆ, ಆಮೇಲೆ ಮುತ್ತೈದೆಗೆ ಎರಡು ಸಾರಿ ಆಪೋಶನ ಹಾಕುವುದು.

ಶ್ರದ್ಧಾಯಾಂ ಪ್ರಾಣೇ ನಿವಿಶ್ಯಾಽಮೃತಗ್ಂ ಹುತಂ । ಪ್ರಾಣಮನ್ನೇ ನಾಪ್ಯಾಯಸ್ವ । ಶ್ರದ್ಧಾಯಾ ಮಪಾನೇ ನಿವಿಶ್ಯಾಽಮೃತಗ್ಂ ಹುತಂ । ಅಪಾನಮನ್ನೇ ನಾಪ್ಯಾಯಸ್ವ । ಶ್ರದ್ಧಾಯಾಂ ವ್ಯಾನೇನಿವಿಶ್ಯಾಽಮೃತಗ್ಂ ಹುತಂ । ವ್ಯಾನಮನ್ನೇ ನಾಪ್ಯಾಯಸ್ವ । ಶ್ರದ್ಧಾಯಾಮುದಾನೇ ನಿವಿಶ್ಯಾಽಮೃತಗ್ಂ ಹುತಂ । ಉದಾನಮನ್ನೇನಾಪ್ಯಾಯಸ್ವ । ಶ್ರದ್ಧಾಯಾಗ್ಂ ಸಮಾನೇ ನಿವಿಶ್ಯಾಽಮೃತಗ್ಂ ಹುತಂ । ಸಮಾನಮನ್ನೇನಾಪ್ಯಾಯಸ್ವ । ಅಂಗುಷ್ಠಮಾತ್ರ ಪುರುಷೋಽಂಗುಷ್ಠಂ ಚ ಸಮಾಶ್ರಿತಃ । ಈಶಃ ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್ ॥

ರೌರವೇಽಪುಣ್ಯನಿಲಯೇ ಪದ್ಮಾರ್ಬುದ ನಿವಾಸಿನಾಂ ।
ಅರ್ಥಿನಾಮುದಕಂ ದತ್ತಮಕ್ಷಯ್ಯಮುಪತಿಷ್ಠತು ।

ಈ ಮಂತ್ರ ಹೇಳುವಾಗ ಬ್ರಾಹ್ಮಣರು ಉತ್ತರಾಪೋಶನ ತೆಗೆದುಕೊಳ್ಳಬೇಕು.

ಆಪೋಶನ ತೆಗೆದುಕೊಂಡ ನಂತರ ಉಳಿದ ನೀರನ್ನು ನೆಲದ ಮೇಲೆ ಬಿಡಬೇಕು. (ಈ ನೀರನ್ನು ಹೀಗೆ ಬಿಡುವುದರಿಂದ - ಪ್ರಾಣಾಪಾನಾದಿ ಪಂಚಪ್ರಾಣಗಳು ತೃಪ್ತಿ ಹೊಂದುವುವು. ರೌರವ ನರಕದಲ್ಲಿರುವ ಪದ್ಮಾರ್ಬುದ ಸಂಖ್ಯೆಯ ನಿವಾಸಿಗಳು ಈ ಉದಕದಿಂದ ಆನಂದವನ್ನು ಪಡೆಯುವರು).

ಇದಾದಮೇಲೆ ಬ್ರಾಹ್ಮಣ, ಸುವಾಸಿನಿಯರು ಎದ್ದು ಕೈಕಾಲುಗಳನ್ನು ತೊಳೆದುಕೊಳ್ಳುವರು. ಇದಕ್ಕಾಗಿ 3 ತಂಬಿಗೆಗಳಲ್ಲಿ ನೀರನ್ನು ಸಿದ್ಧಪಡಿಸಿಟ್ಟಿರಬೇಕು. ಬ್ರಾಹ್ಮಣರು ಅನಂತರ ಆಚಮನ ಮಾಡಿ, ಪಿಂಡಪ್ರದಾನವಾಗುವ ಜಾಗದಲ್ಲಿ ಕುಳಿತುಕೊಳ್ಳುವರು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.




ಚಿತ್ರ. 9

ವಿಶ್ವೇದೇವ ಪಿತೃಸ್ಥಾನಗಳ ಮಧ್ಯದಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು ತನ್ನ ಮುಂದೆ ನೆಲವನ್ನು ಪ್ರೋಕ್ಷಿಸಿ ಉಲ್ಲೇಖ ಮಾಡಿ (ಮಧ್ಯದ 3 ಬೆರಳುಗಳಿಂದ ಮೇಲಿನಿಂದ ಕೆಳಕ್ಕೆ ಗೀಚಿ) ಉದ್ದವಾದ ಛಿನ್ನವಲ್ಲದ ದರ್ಭೆಗಳನ್ನು (16 ದರ್ಭೆಗಳಿಗೆ ಕಮ್ಮಿ ಇಲ್ಲದೆ) ದಕ್ಷಿಣಾಗ್ರವಾಗಿ ಹರಡಿ, ನೀರು ಚುಮುಕಿಸಿ, ಅದರ ಮೇಲೆ ತಾಮ್ರದ ವಿಷ್ಣು ಪಾದವನ್ನು ಉತ್ತರಾಭಿಮುಖವಾಗಿ ಇಟ್ಟು, ಪಿಂಡಪ್ರದಾನಕ್ಕೆ ಸಿದ್ಧಪಡಿಸಿಕೊಳ್ಳಬೇಕು. (ಈ ವಿಷಯದಲ್ಲಿ ಚಿತ್ರ 10. ನೋಡಿ. ಪಿತೃಗಳ ಪಿಂಡಗಳನ್ನು ಇಡುವ ಸ್ಥಳಗಳನ್ನು (1) (2) (3) ಎಂದು ಚಿತ್ರದಲ್ಲಿ ಗುರ್ತಿಸಿದೆ).

ಅಪಾಂ ಮೇಧ್ಯಂ ಯಜ್ಞಿಯಗ್ಂ ಸದೇವಗ್ಂ ಶಿವಮಸ್ತು ಮೇ । ಆಚ್ಛೇತ್ತಾವೋಮಾರಿಷಂ ಜೀವಾನಿ ಶರದಶ್ಶತಮ್ ।

ಅಚ್ಛಿನತ್ತಿ ।

(ಈ ಮಂತ್ರದಿಂದ ಪಿಂಡಪ್ರದಾನಕ್ಕೆ ಹಾಸಿದ ದರ್ಭೆಗಳಲ್ಲಿ ಎರಡು ದರ್ಭೆಗಳನ್ನು ತೆಗೆದುಕೊಂಡು ಚಿಗುರೆ ಹಾಕಿ ಆಗತಾನೇ ದರ್ಭೆ ಕತ್ತರಿಸಿ, ತಂದಂತೆ ಭಾವಿಸಿಕೊಳ್ಳಲಾಗಿದೆ).

ಅಪ ಉಪಸ್ಪೃಶ್ಯ ।

ಕಲಶೋದಕವನ್ನು ಕೂರ್ಚದಿಂದ ಅದ್ದಿ ಕೈಗೆ ಪ್ರೋಕ್ಷಿಸಿಕೊಳ್ಳುವುದು.

ಸಕೃದಾಚ್ಛಿನ್ನಂ ಬರ್ಹಿರೂರ್ಣಾಮೃದುಸ್ಯೋನಂ ಪಿತೃಭ್ಯಸ್ತ್ವಾ ಭರಾಮ್ಯಹಂ । ಅಸ್ಮಿನ್ ತ್ಸೀದಂತು ಮೇ ಪಿತರಸ್ಸೋಮ್ಯಾಃ (ಮಾತರಸ್ಸೋಮ್ಯಾಃ) ಪಿತಾಮಹಾಃ ಪ್ರಪಿತಾಮಹಾಶ್ಚಾನುಗೈಸ್ಸಹ । (ಪಿತಾಮಹೀ, ಪ್ರಪಿತಾಮಹೀಶ್ಚಾನುಗೈಸ್ಸಹ ।) ಸಕೃದಾಚ್ಛಿನ್ನೈರ್ದರ್ಭೈರವಸ್ತೀರ್ಯ ॥

ಪಿಂಡಪ್ರದಾನಕ್ಕೆ ಹಾಸಿರುವ ದರ್ಭೆಗಳು ತುಂಡಿಲ್ಲದವುಗಳಾಗಿರಬೇಕು. ಎಳೆಯ ವಾಗಿಯೂ, ಹಸುರಾಗಿಯೂ, ಮೃದುವಾಗಿಯೂ ಇರಬೇಕು. ಇಂತಹವುಗಳನ್ನು ಹಾಸಿ ಸಿದ್ಧಪಡಿಸಿದ್ದೇನೆ. ಪಿತೃಗಳೇ - ಪಿತೃ, ಪಿತಾಮಹ, ಪ್ರಪಿತಾಮಹರುಗಳೊಡನೆ / ಮಾತೃ ಪಿತಾಮಹಿ / ಪ್ರಪಿತಾಮಹಿಗಳೊಡನೆ ದರ್ಭೆಯ ಮೇಲಕ್ಕೆ ಬರಬೇಕೆಂದು ಪ್ರಾರ್ಥಿಸುವುದು.

ಮಾರ್ಜಯಂತಾಂ ಮಮ ಪಿತರಃ (ಮಾತರಃ) । ಮಾರ್ಜಯಂತಾಂ ಮಮ ಪಿತಾಮಹಾಃ (ಪಿತಾಮಹೀಃ) । ಮಾರ್ಜಯಂತಾಂ ಮಮ ಪ್ರಪಿತಾಮಹಾಃ (ಪ್ರಪಿತಾಮಹೀಃ) ।

ಈ ಮಂತ್ರಗಳಿಂದ ದರ್ಭೆಯ ಮೇಲಿರುವ ವಿಷ್ಣುಪಾದದ ಮೇಲೆ ಉತ್ತರದಿಂದ ದಕ್ಷಿಣಕ್ಕೆ

1. ಪಿತೃ 2. ಪಿತಾಮಹ 3. ಪ್ರಪಿತಾಮಹ

(1. ಮಾತೃ 2. ಪಿತಾಮಹೀ 3. ಪ್ರತಾಪಿಮಹೀ)

ಈ 3 ಕಡೆ 1, 2, 3 ಈ ಕ್ರಮದಲ್ಲಿ ಎಳ್ಳು ನೀರು ಬಿಡುವುದು.

ಏತತ್ತೇ ಅಸ್ಮತ್ ಪಿತಃ ಗೋತ್ರ ...... ಶರ್ಮನ್ ವಸುರೂಪ (ಏತತ್ತೇ ಅಸ್ಮನ್ಮಾತಃ) ..... (ಗೋತ್ರೇ) ....... (ದಾಯೀ) (ವಸುರೂಪೇ) ಯೇ ಚ ತ್ವಾಮತ್ರಾಮನು ಏತತ್ತೇ ಅಸ್ಮತ್ಪಿತ್ರೇ ....... ಶರ್ಮಣೇ ...... ಗೋತ್ರಾಯ ವಸುರೂಪಾಯ (ಏತತ್ತೇ ಅಸ್ಮನ್ಮಾತ್ರೇ) (..... ದಾಯೈ) (..... ಗೋತ್ರಾಯೈ) - (ವಸುರೂಪಾಯೈ) ಯೇ ಚ ತ್ವಾಮನುಗಚ್ಛಂತಿ ತೇಭ್ಯ(ತಾಭ್ಯಃ)ಶ್ಚಾಯಂ ಪಿಂಡಸ್ತಸ್ಮೈ (ತಸ್ಯೈ) ॥

ದರ್ಭೆಯ ಮೇಲೆ ಪ್ರಪಿತಾಮಹಸ್ಥಾನದಲ್ಲಿ (3) ರಲ್ಲಿ (ಪ್ರಪಿತಾಮಹಿಸ್ಥಾನದಲ್ಲಿ) ಪಿಂಡಪ್ರದಾನ ಮಾಡುವುದು (ತರ್ಪಣ ಕೊಡುವ ರೀತಿಯಲ್ಲಿ ಇಡುವುದು). ಗಯಾ ಕ್ಷೇತ್ರದಲ್ಲಿ ಪಿಂಡಪ್ರದಾನ ಮಾಡಿದಂತಾಗಲಿ ಎನ್ನುವುದು.

ಅಸ್ತು ।

ಅದಕ್ಕೆ ಬ್ರಾಹ್ಮಣರು 'ಹಾಗೆಯೇ ಆಗಲಿ' ಎನ್ನಬೇಕು.

**ಪಿತೃಭ್ಯಸ್ಸ್ವಧಾ ವಿಭ್ಯಸ್ಸ್ವಧಾ ನಮಃ । ಪಿತಾಮಹೇಭ್ಯಃ ಸ್ವಧಾವಿಭ್ಯ ಸ್ವಧಾ ನಮಃ । ಪ್ರಪಿತಾಮಹೇಭ್ಯಃ ಸ್ವಧಾ ವಿಭ್ಯಸ್ಸ್ವಧಾ ನಮಃ । ಅತ್ರ ಪಿತರೋ ಯಥಾ ಭಾಗಂ ಮಂದಧ್ವಮ್ ॥**

ಪಿತೃಗಳೇ ನಾನು 'ಸ್ವಧಾನಮಃ' ಎಂದು ಹೇಳಿ ಅರ್ಪಿಸಿದ ಪಿಂಡದಲ್ಲಿ ನೀವು ಎಲ್ಲರೂ ಒಟ್ಟಿಗೆ ಬಂದು ನಿಮ್ಮ ನಿಮ್ಮ ಭಾಗವನ್ನು ನೀವು ತೆಗೆದುಕೊಳ್ಳಿ ಎಂದು ಪ್ರಾರ್ಥಿಸುವುದು.

ಬದರೀ ಕ್ಷೇತ್ರಕ್ಕೆ ಹೋಗಿ, ಬ್ರ ಹ್ಮಕಪಾಲದಲ್ಲಿ ಪಿಂಡಪ್ರದಾನ ಮಾಡಿದರೂ, ನಮ್ಮ ಪಿತೃಗಳ ಕಾಲಶ್ರಾದ್ಧವನ್ನು ನಮ್ಮ ದೇಹಪಾತವಾಗುವವರೆಗೂ ವರ್ಷಂಪ್ರತಿ ಯಥಾವಿಧಿ ಆಚರಿಸಬೇಕು.

**ಅಮೀಮದಂತ ಪಿತರಃ ಸೋಮ್ಯಾಃ । ಯೇ ಸಮಾನಾಃ ಸಮನಸಃ । ಪಿತರೋ ಯಮರಾಜ್ಯೇ ॥ ತೇಷಾಂ ಲೋಕಃ ಸ್ವಧಾ ನಮಃ । ಯಜ್ಞೋ ದೇವೇಷು ಕಲ್ಪತಾಂ । ಯೇ ಸಜಾತಾಃ ಸಮನಸಃ । ಜೀವಾ ಜೀವೇಷು ಮಾಮಕಾಃ । ತೇಷಾಗ್ಂ ಶ್ರೀರ್ಮಯಿ ಕಲ್ಪತಾಂ । ಅಸ್ಮಿನ್ ಲೋಕೇ ಶತಗ್ಂ ಸಮಾಃ ॥**

ಪಿತೃಗಳನ್ನು ಪ್ರಾರ್ಥಿಸುವುದು.

ವಸು, ರುದ್ರ, ಆದಿತ್ಯ ರೂಪಗಳನ್ನು ಸ್ಥೂಳ ನಿರ್ದೇಶನದಿಂದ ತಿಳಿಸಬೇಕಾದರೆ :-

1) ಸ್ಥೂಲಶರೀರಕ್ಕೆ ಆಶ್ರಯವಾದ, ಸ್ಥೂಲಶರೀರದಿಂದಿದ್ದ ನಮ್ಮ ಮಾತಾಪಿತೃಗಳು ವಾಸಿಸುತ್ತಿದ್ದ, ಭೂಲೋಕವೇ 'ವಸು' ಅಂದರೆ ಪಿತೃಲೋಕ. 2) ಸೂಕ್ಷ್ಮಶರೀರಕ್ಕೆ ಆಶ್ರಯವಾದ ಭೂಲೋಕದಿಂದ ನಮ್ಮ ಮಾತಾಪಿತೃಗಳು ಸೇರುವ ಚತುರ್ಮುಖ ಬ್ರಹ್ಮನಿರುವ ಸ್ವರ್ಗಲೋಕವೇ 'ರುದ್ರ' ಅಂದರೆ ಪಿತಾಮಹರ ಲೋಕ. ಇದರಿಂದಲೇ ಬ್ರಹ್ಮವನ್ನು, ಪರಮೇಷ್ಠೀ ಪಿತಾಮಹಃ ಎನ್ನುವರು. 3) ಕಾರಣ ಶರೀರಕ್ಕೆ ಆಶ್ರಯವಾದ, ನಮ್ಮ ಪ್ರಪಿತಾಮಹ ಪ್ರಪಿತಾಮಹಿಗಳು ಸೇರುವ 'ವೈಕುಂಠ'ವೇ ವಿಷ್ಣುವಿನ ಲೋಕವಾಗಿ, 'ಆದಿತ್ಯ'ವೆನ್ನಲ್ಪಡುವುದು. ಇದರಿಂದಲೇ ವಿಷ್ಣುವನ್ನು 'ಸವಿತಾ ಪ್ರಪಿತಾಮಹಃ' ಎನ್ನುವರು.

ಸವ್ಯೇನ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ವೀರಂ ಮೇ ಧತ್ತ ಪಿತರಃ ।

ಪಿತೃಗಳನ್ನು ಈ ಮಂತ್ರದಿಂದ, ವಂಶಾಭಿವೃದ್ಧಿ ಮಾಡಿ ಎಂದು ಪ್ರಾರ್ಥಿಸಿ ಕೊಳ್ಳುವುದು.

ಚರು ಶೇಷಮಾಘ್ರಾಯ । ಪವಿತ್ರಂ ವಿಸೃಜ್ಯ ಪಾದೌ ಪ್ರಕ್ಷಾಳ್ಯ । ಆಚಮ್ಯ । ಪುನಃ ಪವಿತ್ರಂ ಧೃತ್ವಾ ।

ಅರಕಿನ ಚಟ್ಟಿಯಲ್ಲಿ ಉಳಿದಿರುವ ಅನ್ನಶೇಷದ ಒಂದು ಅಗುಳನ್ನು ಆಘ್ರಾಣಿಸಿ ಹೊರಗೆ ಹಾಕಿಬಿಟ್ಟು ಅನಂತರ ಪವಿತ್ರವನ್ನು ಬಿಚ್ಚಿಹಾಕಿ ಪಾದಪ್ರಕ್ಷಾಳನೆ ಮಾಡಿ ಆಚಮನ ಮಾಡಿ ಬೇರೆ ಪವಿತ್ರ ಹಾಕಿಕೊಂಡು ಬರುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಮಾರ್ಜಯಂತಾಂ ಮಮ ಪಿತರಃ (ಮಾತರಃ) । ಮಾರ್ಜಯಂತಾಂ ಮಮ ಪಿತಾಮಹಾಃ (ಪಿತಾಮಹೀಃ) । ಮಾರ್ಜಯಂತಾಂ ಮಮ ಪ್ರಪಿತಾಮಹಾಃ (ಪ್ರಪಿತಾಮಹೀಃ) ॥

ಈ ಮಂತ್ರಗಳಿಂದ 3 ಪಿಂಡಗಳಿಗೆ 1, 2, 3 ಕ್ರಮದಿಂದ ಉದ್ಧರಣೆಯಿಂದ ಎಳ್ಳು ನೀರು ಬಿಡುವುದು.

ಅಸ್ಮತ್ ಪಿತಃ ..... ಗೋತ್ರ ..... ಶರ್ಮನ್ ವಸುರೂಪ (ಅಸ್ಮನ್ಮಾತರಃ) (..... ಗೋತ್ರೇ) (..... ದಾಯೀ) (ವಸುರೂಪೇ) ಅಂಕ್ಷ್ವ । ಅಸ್ಮತ್ ಪಿತಾಮಹ ..... ಗೋತ್ರ ..... ಶರ್ಮನ್ ರುದ್ರರೂಪ (ಅಸ್ಮತ್ ಪಿತಾಮಹೀ) (..... ಗೋತ್ರೇ) (..... ದಾಯೀ) (ರುದ್ರರೂಪೇ) ಅಂಕ್ಷ್ವ । ಅಸ್ಮತ್ ಪ್ರಪಿತಾಮಹ ..... ಗೋತ್ರ ..... ಶರ್ಮನ್ ಆದಿತ್ಯರೂಪ (ಅಸ್ಮತ್ ಪ್ರಪಿತಾಮಹೀ) (..... ಗೋತ್ರೇ) (..... ದಾಯೀ) (ಆದಿತ್ಯರೂಪೇ) ಅಂಕ್ಷ್ವ ॥

ಸ್ವಲ್ಪ ತುಂಡು ದರ್ಭೆಗಳನ್ನು ತೆಗೆದುಕೊಂಡು ಅವನ್ನು ಅರ್ಧ ಭಾಗ ಮಾಡಿ ಒಂದು ಅರ್ಧದ ಕೊನೆಗಳನ್ನು ತುಪ್ಪದಲ್ಲಿ ಅದ್ದಿ (ಅಂಕ್ಷ್ವಕ್ಕೂ) ಇನ್ನರ್ಧದಲ್ಲಿ ಭಕ್ಷ್ಯ ಬೇಯಿಸಿದ ಎಣ್ಣೆ ಬಾಣಲೆಯ ತಳದ ಮಸಿಯನ್ನು ಕೆರೆದುಕೊಂಡು ಅದನ್ನು (ಅಭ್ಯಂಕ್ಷ್ವಕ್ಕೂ) ಉಪಯೋಗಿಸಿಕೊಳ್ಳುವುದು.

ಈ 'ಅಂಕ್ಷ್ವ' ಮಂತ್ರದಿಂದ ಮೂರು ಪಿಂಡಗಳಿಗೆ ತುಪ್ಪ ಅದ್ದಿದ ಮೊದಲನೇ ಅರ್ಧ ದರ್ಭೆಯಿಂದ ತುಪ್ಪವನ್ನು ಸವರುವುದು. ಚಿತ್ರ. 9ರ 1, 2, 3 ಈ ಕ್ರಮದಿಂದ.

ಅಸ್ಮತ್ ಪಿತಃ ..... ಗೋತ್ರ ..... ಶರ್ಮನ್ ವಸುರೂಪ (ಅಸ್ಮತ್ ಮಾತರಃ) (..... ಗೋತ್ರೇ) (..... ದಾಯೀ) (ವಸುರೂಪೇ ) ಅಭ್ಯಂಕ್ಷ್ವ ಅಭ್ಯಂಕ್ಷ್ವ ।

ಅಸ್ಮತ್ ಪಿತಾಮಹ ..... ಗೋತ್ರ ..... ಶರ್ಮನ್ ರುದ್ರರೂಪ (ಅಸ್ಮತ್ ಪಿತಾಮಹೀ) (..... ಗೋತ್ರೇ) (..... ದಾಯೀ) (ರುದ್ರರೂಪೇ) ಅಭ್ಯಂಕ್ಷ್ವ ಅಭ್ಯಂಕ್ಷ್ವ ।

ಅಸ್ಮತ್ ಪ್ರಪಿತಾಮಹ ..... ಗೋತ್ರ ..... ಶರ್ಮನ್ ಆದಿತ್ಯರೂಪ (ಅಸ್ಮತ್ ಪ್ರಪಿತಾಮಹೀ) (....... ಗೋತ್ರೇ) (...... ದಾಯೀ) (ಆದಿತ್ಯರೂಪೇ) ಅಭ್ಯಂಕ್ಷ್ವ ಅಭ್ಯಂಕ್ಷ್ವ ।

ಎರಡನೇ ಭಾಗದ ದರ್ಭೆಯಿಂದ ಅದರ ತುದಿಯಲ್ಲಿರುವ ಮಸಿಯನ್ನು 3 ಪಿಂಡಗಳಿಗೂ ಸವರುವುದು. ಚಿತ್ರದ 1, 2, 3, ಈ ಕ್ರಮದಿಂದ.

(ಪಿತೃಗಳಿಗೆ ಎಣ್ಣೆ ಹಾಕಿ, ನೀರು ಹಾಕಿದಂತೆ ಇದರ ಭಾವನೆ.)

ಅಪ ಉಪಸ್ಪೃಶ್ಯ ।

ಉದ್ಧರಣೆಯಿಂದ ಕೈತೊಳೆಯುವುದು.

ಏತದ್ವಃ ಪಿತರೋ ವಾಸೋ ವಾಸಾಗ್ಂಸಿ । ಇತಿ ವಸ್ತ್ರಂ ದತ್ವಾ ॥

(ಶ್ರಾದ್ಧಕರ್ತೃವು ತನ್ನ ಉಟ್ಟ ಬಟ್ಟೆಯ ಒಂದು ಎಳೆ ದಾರವನ್ನು ತೆಗೆದುಕೊಂಡು ಕಲಶದ ನೀರಿನಿಂದ ತೊಳೆದು ಮಧ್ಯಮ ಪಿಂಡದ ಮೇಲೆ ಇಡಬೇಕು.)

ತತೋನೋಽನ್ಯತ್ಪಿತರೋ (ತತೋನೋಽನ್ಯಂ ಮಾತರೋ) ಮಾಯೋಷ್ಟ । ಪಿತಾಮಹಾ (ಪಿತಾಮಹ್ಯೋ) ಮಾಯೋಷ್ಟ । ಪ್ರಪಿತಾಮಹಾ (ಪ್ರಪಿತಾಮಹ್ಯೋ) ಮಾಯೋಷ್ಟ ॥

ಈ ಮಂತ್ರಗಳಿಂದ 1, 2, 3 ಕ್ರಮದಿಂದ 3 ಪಿಂಡಗಳ ಮೇಲೂ ಅರಕಿನ ಚಟ್ಟಿಯಲ್ಲಿ ಉಳಿದಿರುವ ಶೇಷ ಅನ್ನವನ್ನು ಸ್ವಲ್ಪ ಸ್ವಲ್ಪ ಇಡಬೇಕು.

ನಮಸ್ಕಾರಾ ಇಮೇ ಮಂತ್ರಾಃ -

ಓಂ ನಮೋ ವಃ ಪಿತರೋ ರಸಾಯ, ನಮೋ ವಃ ಪಿತರಶ್ಶುಷ್ಮಾಯ, ನಮೋ ವಃ ಪಿತರೋ ಜೀವಾಯ, ನಮೋ ವಃ ಪಿತರಃ ಸ್ವಧಾಯೈ, ನಮೋ ವಃ ಪಿತರೋ ಮನ್ಯವೇ, ನಮೋ ವಃ ಪಿತರೋ ಘೋರಾಯ, ಪಿತರೋ ನಮೋ ವೋ ಯ ಏತಸ್ಮಿನ್ ಲೋಕೇ ಸ್ಥ ಯುಷ್ಮಾಗ್ಂ ಸ್ತೇನು ಯೇಽಸ್ಮಿನ್ ಲೋಕೇ ಮಾಂ ತೇನು ಯ ಏತಸ್ಮಿನ್ ಲೋಕೇ ಸ್ಥ ಯೂಯಂ ತೇಷಾಂ ವಸಿಷ್ಠಾ ಭೂಯಾಸ್ತ ಯೇಽಸ್ಮಿನ್ ಲೋಕೇಽಹಂ ತೇಷಾಂ ವಸಿಷ್ಠೋ ಭೂಯಾಸಮ್ ॥

ಗೃಹಾನ್ನಃ ಪಿತರೋ ದತ್ತ ಸದೇವಃ ಪಿತರೋ ಗೇಷ್ಮ । ಊರ್ಜಂ ವಹಂತೀ

ರಮೃತಂ ಘೃತಂ ಪಯಃ ಕೀಲಾಲಂ ಪರಿಸ್ರುತಮ್ । ಸ್ವಧಾಸ್ಥ ತರ್ಪಯತ ಮೇ

ಪಿತೄಗ್‌ಸ್ತೃಪ್ಯತ ತೃಪ್ಯತ, ತೃಪ್ಯತ ॥

ಈ ಮಂತ್ರದಿಂದ ಪಿಂಡರೂಪೀ ಪಿತೃಗಳಿಗೆ ಕೈಮುಗಿಯುವುದು. ಎಳ್ಳು ಮತ್ತು ತೊಳೆದ ಅಕ್ಕಿಯನ್ನು ತೆಗೆದುಕೊಂಡು ಎರಡು ಕೈಗಳಿಂದಲೂ, ಪಿಂಡಗಳ ಮೇಲೆ ಅಂಗೈಗಳಿಂದ ಉಜ್ಜುತ್ತಾ ಉದುರಿಸುವುದು.

ಉದಕಪಾತ್ರಂ ಪಿಂಡಾನಾಮುಪರಿ ಅಪ್ರದಕ್ಷಿಣಂ ಪರಿಷಿಂಚನ್ ನಿಕ್ಷಿಪ್ಯ ।

ಉದಕಪಾತ್ರಂ ಪಿಂಡಾನಾಮುಪರಿ ಅಪ್ರದಕ್ಷಿಣಂ ಪರಿಷಿಂಚನ್ ನಿಕ್ಷಿಪ್ಯ ।

ಪಿಂಡಗಳನ್ನು ಇಟ್ಟಿದ್ದ ಅರಕಿನ ಚಟ್ಟಿಗೆ 2 ಉದ್ಧರಣೆ ಕಲಶೋದಕವನ್ನು ಹಾಕಿ, ಆ ಅರಕಿನ ಚೆಟ್ಟಿಯನ್ನು ಪಿಂಡಗಳ ಸುತ್ತಲೂ ಅಪ್ರದಕ್ಷಿಣೆಯಾಗಿ ಸುತ್ತುಗಟ್ಟುತ್ತಾ ಆ ಅರಕಿನ ಚೆಟ್ಟಿಯ ನೀರು ಪಿಂಡದ ಸುತ್ತಲೂ ಪರಿಷೇಚನೆ ಆಗುವಂತೆ ಮಾಡುವುದು.

ಆಮೇಲೆ ಅರಕಿನ ಚೆಟ್ಟಿಯನ್ನು ಪಿಂಡಗಳ ಮೇಲೆ ಬೋರಲು ಹಾಕಿ - ಪುನಃ ತೆಗೆದು ತನ್ನ ಎಡಗಡೆ ಇಟ್ಟುಕೊಳ್ಳುವುದು.

ಮನೋನ್ವಾ ಹುವಾಮಹೇ ನಾರಾಶಗ್‌ಂಸೇನ ಸ್ತೋಮೇನ ಪಿತೃಣಾಂ ಚ

ಮನ್ಮಭಿಃ । ಆ ನ ಏತು ಮನಃ ಪುನಃ ಕ್ರತ್ವೇ ದಕ್ಷಾಯ ಜೀವಸೇ ॥

ಈ ಮಂತವನ್ನು ಪಠಿಸಿ ಪಿತೃಗಳನ್ನು ಸ್ತೋತ್ರ ಮಾಡಿ.

ಉಪವೀತಿ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

---

ವಿಶೇಷ ವಿಷಯ : ಶ್ರಾದ್ಧದಲ್ಲಿ

ಉಚ್ಛಿಷ್ಟಂ ಶಿವನಿರ್ಮಾಲ್ಯಂ ವಮನಂ ಶವಕರ್ಪಟಿನಮ್ ।

ಶ್ರಾದ್ಧೇ ಸಪ್ತಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ ॥

ಎಂದು ಏಳು ಪವಿತ್ರ ವಸ್ತುಗಳನ್ನು ಹೇಳಿದೆ.

1) ಉಚ್ಛಿಷ್ಟ ಅಂದರೆ ಕರು ಕುಡಿದ ಮೇಲೆ ಕರೆದ ಹಾಲು. 2) ಶಿವ ನಿರ್ಮಾಲ್ಯವೆಂದರೆ ಶಿವನ ತಲೆಯಿಂದ ಹರಿದುಬಂದ ಗಂಗೆ. 3) ವಮನವೆಂದರೆ ಜೇನುಹುಳುಗಳು, ಮಕರಂದವನ್ನು ಪಾನ ಮಾಡಿ, ತಮ್ಮ ಗೂಡುಗಳಲ್ಲಿ ಉಗುಳುವ (ವಾಂತಿ ಮಾಡುವ) ರಸವಾದ ಜೇನುತುಪ್ಪ. 4) ಶವಕರ್ಪಟವೆಂದರೆ, ರೇಷ್ಮೆ ಹುಳುಗಳು ತಾವು ಒಳಗೆ ಇದ್ದುಕೊಂಡು ತಮ್ಮ ಸುತ್ತ ರೇಷ್ಮೆ ನೂಲನ್ನು ಕಟ್ಟಿಕೊಳ್ಳುವುದು. ಆ ಹುಳು ಸತ್ತು ಅದರ ಸುತ್ತಲೂ ಇರುವ ಸತ್ತ ಹುಳುವಿನ ಬಟ್ಟೆ ಅಂದರೆ ರೇಷ್ಮೆ ಬಟ್ಟೆ ಎಂದರ್ಥ. 5) ದೌಹಿತ್ರ ಎಂದರೆ ಮಗಳ ಮಗ. ಆತನು ಶ್ರಾದ್ಧದಲ್ಲಿ ಭೋಜನಕ್ಕೆ ಶ್ರೇಷ್ಠ. 6) ಕುತಪ ಎಂದರೆ ಕುತಪ ಕಾಲ. 7) ತಿಲ ಎಂದರೆ ಕರಿಎಳ್ಳು. ಇವೆಲ್ಲಾ ಶ್ರಾದ್ಧದಲ್ಲಿ ಪವಿತ್ರ.

ಜ್ಯೋಕ್ಚ ಸೂರ್ಯಂ ದೃಶೇ । 

ಸೂರ್ಯಮಂಡಲವನ್ನು ನೋಡಿ ಸೂರ್ಯನಿಗೆ ಕೈ ಮುಗಿಯುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಪುನರ್ನಃ ಪಿತರೋ ಮನೋ ದದಾತು ದೈವ್ಯೋ ಜನಃ । ಜೀವವ್ರಾತಗ್‌ಂ ಸಚೇಮಹಿ । ಯದಂತರಿಕ್ಷಂ ಪೃಥಿವೀಮುತದ್ಯಾಂ ಯನ್ಮಾತರಂ ಪಿತರಂ ವಾಜಿಹಿಗ್‌ಂಸಿಮ । ಅಗ್ನಿರ್ಮಾತಸ್ಮಾದೇನಸೋ ಗಾರ್ಹಪತ್ಯಃ ಪ್ರಮುಂಚತು ದುರಿತಾ ಯಾನಿ ಚಕೃಮ ಕರೋತು ಮಾಮನೇ ನಸಮ್ ॥

ಕುಲಾಭಿವೃದ್ಧ್ಯರ್ಥಂ ಸವ್ಯೇನ ಪಾರ್ವಣ ಪೂಜಾಂ ಕರಿಷ್ಯೇ ।

ಜನಿವಾರ ಬಲಕ್ಕೆ ಹಾಕಿಕೊಂಡು ಪಾರ್ವಣ (ಪಿಂಡ) ಪೂಜೆ ಮಾಡುವುದು.

ಪಿಂಡಸ್ಥ ಪಿತೃದೇವತಾಭ್ಯೋ ನಮಃ ।

ಪಿತೃ ರೂಪಿ ಪಿಂಡಗಳಿಗೆ ಪೂಜೆ ಮಾಡುವುದು.

ತಿಲಾಕ್ಷತ ಯವಾಕ್ಷತಾನ್ ಸಮರ್ಪಯಾಮಿ । ದರ್ಭಪತ್ರಾಣಿ ಸಮರ್ಪಯಾಮಿ । ತುಲಸೀ ಪತ್ರಾಣಿ ಸಮರ್ಪಯಾಮಿ । (ಸುವಾಸಿನೀ ಶ್ರಾದ್ಧೇ - ಹರಿದ್ರಾಚೂರ್ಣಂ, ಕುಂಕುಮಚೂರ್ಣಂ, ಹರಿದ್ರಾಕ್ಷತಾನ್, ಪುಷ್ಪಮಾಲಿಕಾಂ ಸಮರ್ಪಯಾಮಿ) ॥

ಯವ, ತಿಲ, ತುಲಸೀದಳ, ದರ್ಭೆ ಚೂರು, ಹೂವು ಇವುಗಳನ್ನು ಮೂರು ಪಿಂಡಗಳ ಮೇಲೂ ಇಡುವುದು.

ಗಂಧಂ ಸಮರ್ಪಯಾಮಿ ।

ಉದ್ಧರಣೆಯಲ್ಲಿ ನೀರು ತೆಗೆದುಕೊಂಡು ಅದಕ್ಕೆ ಸಲ್ಪ ದೊನ್ನೆಯಲ್ಲಿರುವ ತೇದ ಗಂಧವನ್ನು ಕದಡಿ, ಆ ಗಂಧೋದಕವನ್ನು 3 ಪಿಂಡಗಳ ಮೇಲೂ ಬಿಡುವುದು. (ಮಾತೃ,

---

ವಿಶೇಷ ವಿಷಯ :- ಅಧಿಕ ಮಾಸದಲ್ಲಿ ಕಾಲಶ್ರಾದ್ಧ ವಿಚಾರ.

ವರ್ಷೇ ವರ್ಷೇ ತು ಯಚ್ಛ್ರಾದ್ಧಂ ಮಾತಾ ಪಿತ್ರೋರ್ಮೃತೇಹನೇ ।
ಮಲಮಾಸೇ ನ ತತ್ಕಾರ್ಯಂ ವ್ಯಾಘ್ರಸ್ಯ ವಚನಂ ಯಥಾ ।
ಮಲಮಾಸೇ ಮೃತಾನಾಂ ತು । ಶ್ರಾದ್ಧಂ ಯತ್ ಪ್ರತಿವತ್ಸರಮ್ ।
ಮಲಮಾಸೇ ತು ಕರ್ತವ್ಯಂ ನಾನ್ಯೇಷಾಂ ತು ಕಥಂಚನ ॥

ಎಂಬಂತೆ ನಿಜಮಾಸದಲ್ಲಿ ಸ್ವರ್ಗಸ್ಥರಾದ ಪಿತೃಗಳಿಗೆ, ಅಧಿಕಮಾಸದಲ್ಲಿ ಶ್ರಾದ್ಧ ಬೇಕಿಲ್ಲ. ಅಧಿಕಮಾಸದಲ್ಲಿ ಸ್ವರ್ಗಸ್ಥರಾದ ಪಿತೃಗಳಿಗೆ ನಿಜಮಾಸದಲ್ಲಿ ಶ್ರಾದ್ಧದಲ್ಲಿ ಬೇಕಿಲ್ಲ. ಹೀಗೆಂದು ವ್ಯಾಘ್ರ ಮಹರ್ಷಿಗಳ ವಚನವಿದೆ.

ಪಿತಾಮಹಿ, ಪ್ರಪಿತಾಮಹಿಗಳಲ್ಲಿ - ಸುವಾಸಿನಿಯಾಗಿ ಸತ್ತವರ ಪಿಂಡಕ್ಕೆ ಮಾತ್ರ ಅರಸಿನ ಕುಂಕುಮ, ಹಳದಿ ಮಂತ್ರಾಕ್ಷತೆ ಪುಷ್ಪ ಮಾಲಿಕೆಗಳಿಂದ ಪೂಜೆ ಸಲ್ಲಬೇಕು).

ಧೂಪಾರ್ಥೇ ಆಪಃ - ದೀಪಾರ್ಥೇ ಆಪಃ ॥

ಧೂಪ ದೀಪಕ್ಕೆ ಬದಲಾಗಿ ಕೂರ್ಚದಿಂದ ನೆಲಕ್ಕೆ ಕಲಶದ ನೀರು ಬಿಡುವುದು.

ಓಂ ಭೂರ್ಭುವಸ್ಸುವಃ । ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥ ಸತ್ಯಂ ತ್ವರ್ತೇನ ಪರಿಷಿಂಚಾಮಿ ॥

ಅಮೃತಮಸ್ತು । ಅಮೃತೋಪಸ್ತರಣಮಸಿ ಸ್ವಾಹಾ ॥

ಓಂ ಪ್ರಾಣಾಯ ಸ್ವಾಹಾ । ಓಂ ಅಪಾನಾಯ ಸ್ವಾಹಾ । ಓಂ ವ್ಯಾನಾಯ ಸ್ವಾಹಾ । ಓಂ ಉದಾನಾಯ ಸ್ವಾಹಾ । ಓಂ ಸಮಾನಾಯ ಸ್ವಾಹಾ । ಓಂ ಬ್ರಹ್ಮಣೇ ಸ್ವಾಹಾ ॥

ಪಿಂಡ ಪಿತೃ ದೇವತಾಭ್ಯೋ ನಮಃ । ಗೋಧೂಮಾಪೂಪ, ಮಾಷಾಪೂಪ ನೈವೇದ್ಯಂ ಸಮರ್ಪಯಾಮಿ । ಪೂಗೀಫಲ ತಾಂಬೂಲಂ ಸಮರ್ಪಯಾಮಿ । ಸುವರ್ಣ ಪುಷ್ಪ ದಕ್ಷಿಣಾಂ ಸಮರ್ಪಯಾಮಿ । ಪಂಚೋಪಚಾರ ಪೂಜಾಸ್ಸಮರ್ಪಯಾಮಿ ॥

ಒಂದು ತಟ್ಟೆಯಲ್ಲಿ ಶ್ರಾದ್ಧಕ್ಕೆ ಮಾಡಿರುವ ವಡೆ, ಆಂಬೊಡೆ, ರವೆಉಂಡೆ, ಒಬ್ಬಟ್ಟು ಮುಂತಾದುವುಗಳನ್ನು ಇಟ್ಟು ತಂದು, ಅವನ್ನು ಪಿಂಡಕ್ಕೆ ನೈವೇದ್ಯ ಮಾಡುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಶಮೀಪತ್ರ ಪ್ರಮಾಣೇನ ಪಿಂಡಂ ದದ್ಯಾದ್ಗಯಾ ಶಿರೇ ।
ಉದ್ಧರೇತ್ಸಪ್ತಗೋತ್ರಾಣಿ ಕುಲಮೇಕೋತ್ತರಂ ಶತಮ್ ॥

ಈ ಶ್ಲೋಕವನ್ನು ಹೇಳುತ್ತಾ ಪಿಂಡ ವೇದಿಕೆಯ ಬಲಗಡೆ ಸಮೀಪದಲ್ಲಿ, ನೆಲದ ಮೇಲೆ ಒಂದು ಚೋಟು ಹಾಕುವುದು.

ಸವ್ಯೇನ ಪ್ರಾಣಾನಾಯಮ್ಯ ।

ಜನಿವಾರ ಬಲಕ್ಕೆ ಹಾಕಿಕೊಂಡು ಪ್ರಾಣಾಯಾಮ ಮಾಡಿ

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳುವುದು.

ಅಸ್ಮತ್ಪಿತುಃ (ಅಸ್ಮನ್ಮಾತುಃ) ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧೇ ಅಸ್ಮತ್ಪಿತೃ

ಪಿತಾಮಹ ಪ್ರಪಿತಾಮಹಾನ್ ..... ಗೋತ್ರಾನ್ (ಅಸ್ಮನ್ಮಾತೃ ಪಿತಾಮಹಿ ಪ್ರಪಿತಾಮಹೀಃ) (..... ಗೋತ್ರಾಃ) ..... ಶರ್ಮಣಃ ವಸು ರುದ್ರ ಆದಿತ್ಯರೂಪಾನ್ (..... ದಾಯೀಃ) (ವಸು ರುದ್ರ ಆದಿತ್ಯರೂಪಾಃ) ಉದ್ದಿಶ್ಯ ಮಯಾ ದತ್ತಾಃ ಪಿಂಡಾಃ । ಅಸ್ಮತ್ಪಿತೃ, ಪಿತಾಮಹ, ಪ್ರಪಿತಾಮಹಾನಾಂ (ಅಸ್ಮನ್ಮಾತೃ, ಪಿತಾಮಹಿ, ಪ್ರಪಿತಾಮಹೀನಾಂ) ..... ಗೋತ್ರಾಣಾಂ (..... ಗೋತ್ರಾಣಾಂ) ಶರ್ಮಣಾಂ (..... ದಾಯೀನಾಂ) ವಸು ರುದ್ರ, ಆದಿತ್ಯರೂಪಾಣಾಂ (ವಸು, ರುದ್ರ, ಆದಿತ್ಯರೂಪಾಣಾಂ) ಏತೇಷಾಂ (ಏತಾಸಾಂ) ಗಯಾ ಪಿಂಡಪ್ರದಾನೇನ್ನೈವ । ಅಕ್ಷಯ್ಯತೃಪ್ತಿದ್ವಾರಾ ಪುನರಾವೃತ್ತಿರಹಿತಶಾಶ್ವತಬ್ರಹ್ಮ ಲೋಕಾವಾಪ್ತಿರಸ್ತ್ವಿತಿ ಭವಂತೋ ಬ್ರುವಂತು ॥

ಶ್ರಾದ್ಧ ಕರ್ತೃವು ಈ ಮಂತ್ರವನ್ನು ಹೇಳಿ ತಾನು ಮಾಡಿದ ಶ್ರಾದ್ಧಾಂಗ ಪಿಂಡ ಪ್ರಧಾನವು ಗಯಾ ಪಿಂಡ ಸದೃಶವಾಗಿ, ತತ್ಫಲವಾಗಿ ತನ್ನ ಪಿತೃವಿಗೆ ಶಾಶ್ವತ ಬ್ರಹ್ಮಲೋಕ ಪ್ರಾಪ್ತಿಯಾಗುವುದಲ್ಲವೆ ? ಹೇಳಿ ಎಂದು ಬ್ರಾಹ್ಮಣರನ್ನು ಕೇಳಬೇಕು.

ಪುನರಾವೃತ್ತಿರಹಿತಶಾಶ್ವತಬ್ರಹ್ಮಲೋಕಾವಾಪ್ತಿರಸ್ತು ।

ಅದಕ್ಕೆ ಆ ಬ್ರಾಹ್ಮಣರು 'ಶಾಶ್ವತ ಬ್ರಹ್ಮಲೋಕ ಪ್ರಾಪ್ತಿಯಾಗುವುದು' ಎನ್ನಬೇಕು.

ಉಪವೀತಿ ।

ಜನಿವಾರವನ್ನು ಬಲಕ್ಕೆ ಹಾಕಿಕೊಳ್ಳುವುದು.

ಪಿಂಡಾನ್ ನಮಸ್ಕೃತ್ಯ ।

ಶ್ರಾದ್ಧ ಕರ್ತೃವಿನ ಪತ್ನೀಪುತ್ರಾದಿಗಳೂ, ಪಿಂಡಸ್ಥ ಪಿತೃವಿಗಿಂತ ಚಿಕ್ಕವರಾದ ಎಲ್ಲಾ ನಂಟರೂ, ಪಿಂಡಕ್ಕೆ ನಮಸ್ಕರಿಸಿದ ಮೇಲೆ, ಕೊನೆಯಲ್ಲಿ ಶ್ರಾದ್ಧ ಕರ್ತೃವು ನಮಸ್ಕರಿಸಬೇಕು.

(ಪಿಂಡಕ್ಕೆ ನಮಸ್ಕಾರ ಮಾಡುವ ಕಾಲದಲ್ಲಿ, ಕರ್ತೃಗಳ ಪತ್ನಿಯರು ಕುಂಕುಮವನ್ನು ಹಣೆಗಿಟ್ಟುಕೊಂಡು ನಮಸ್ಕರಿಸಬೇಕು. ಆ ಶ್ರಾದ್ಧದ ದಿನ ಅವರುಗಳು ಅಲ್ಲಿಯವರಿಗೆ ಕುಂಕುಮ ಇಟ್ಟಿರುವುದಿಲ್ಲ.)

ಯುಷ್ಮದನುಜ್ಞಯಾ ಪಿಂಡಾನುದ್ವಾಸಯಿಷ್ಯೇ ।

ಬ್ರಾಹ್ಮಣರನ್ನು ಕುರಿತು ''ನಿಮ್ಮ ಅಪ್ಪಣೆಯಾದರೆ ಪಿಂಡವನ್ನು ವಿಸರ್ಜನೆ ಮಾಡುತ್ತೇನೆ'' ಎನ್ನಬೇಕು.

ಉದ್ವಾಸಯ ॥

ಆದಕ್ಕೆ ಬ್ರಾಹ್ಮಣರು ''ವಿಸರ್ಜಿಸು'' ಎನ್ನಬೇಕು.

ಅಯೋಧ್ಯಾ ಮಧುರಾ ಮಾಯಾ ಕಾಶೀ ಕಾಂಚೀ ಹ್ಯವಂತಿಕಾ ।
ಪುರೀ ದ್ವಾರವತೀ ಚೈವ ಸಪ್ತೈತೇ ಮೋಕ್ಷದಾಯಕಾಃ ॥
ವಿಶ್ವೇಶಂ ಮಾಧವಂ ದುಂಢಿಂ ದಂಡಪಾಣಿಂ ಚ ಭೈರವಂ ।
ವಂದೇ ಕಾಶೀಂ ಗುಹಾಂ ಗಂಗಾಂ ಭವಾನೀಂ ಮಣಿಕರ್ಣಿಕಾಮ್ ॥

ಗೋಕರ್ಣೇಶೋ ಹಿಮವಾನ್ ಪ್ರಯಾಗ ಕಾಶೀ ನರ ಸೋಮೇಶ್ವರ ರುದ್ರಪಾದಾಃ ।
ಶ್ರೀರಂಗ ಕೇದಾರಮನಂತ ಕಾಂಚೀ ಸ್ವಾಮಿನ್ ಕುರುಕ್ಷೇತ್ರ ಸದಾ ನಮಸ್ತೇ ॥

ಉದ್ಧಾರಂ ವಾ ಏತಮಿಂದ್ರ ಉದಹರತ । ವೃತ್ರಗ್ಂ ಹತ್ವಾ । ಅನ್ಯಾಸು ದೇವತಾಸ್ವಧಿ । ಯದ್ವೈಷ ಐಂದ್ರಶ್ಶರ್ಭವತಿ । ಉದ್ಧಾರಮೇವ ತಂ ಯಜಮಾನ ಉದ್ಧರತೇ । ಅನ್ಯಾಸು ಪ್ರಜಾಸ್ವಧಿ । ವೈಶ್ವದೇವಾನಾ ಏಕ ಕಪಾಲೋ ಭವತಿ । ವಿಶ್ವಾನ್ಯೇವ ತೇನ ಕರ್ಮಾಣಿ ಯಜಮಾನೋಽವರುಂಧೇ ॥

ಸ್ವೇದಾಕ್ಷಿನ್ನಮಗ್ನೌ ಪ್ರಹರತಿ ॥

ಹೀಗೆ ಸಮಸ್ತ ಪುಣ್ಯ ಕ್ಷೇತ್ರಗಳನ್ನು ಸ್ಮರಿಸಿಕೊಂಡು, ಆ ಕ್ಷೇತ್ರ ದೇವತೆಗಳಿಗೆ ಅಂತಃ ನಮಿಸುವುದು. ಅನಂತರ ಪಿತಾಮಹ (ಪಿತಾಮಹಿ) ಪಿಂಡವನ್ನು (2) ಬಲಗೈಲಿ ತೆಗೆದುಕೊಂಡು, ಎಡಗೈಲಿ ನೈವೇದ್ಯ ಮಾಡಿದ ಒಂದು 'ವಡೆ'ಯನ್ನು ನೈವೇದ್ಯವಾದ ಭಕ್ಷ್ಯಗಳ ಜೊತೆಗೆ ಹಾಕುವುದು. ಅನಂತರ ಇನ್ನುಳಿದ ಪಿಂಡಗಳನ್ನು, ಅಂದರೆ ಪಿತೃ / ಮಾತೃ ಪಿಂಡವನ್ನು (1) ಬಲಗೈಯಲ್ಲಿ, ಪ್ರಪಿತಾಮಹ / ಪ್ರಪಿತಾಮಹಿ ಪಿಂಡವನ್ನು (3) ಎಡಗೈಯಲ್ಲಿ ಒಟ್ಟಿಗೆ ತೆಗೆದುಕೊಂಡು ಅರಳಿನ ಚಿಟ್ಟಿಯಲ್ಲಿ ತ್ರಿಕೋಣಾಕಾರವಾಗಿ 3 ಗುಪ್ಪೆಗಳಾಗುವಂತೆ ಇಡುವುದು. ಪಿಂಡ ಸ್ಥಾಪನೆಗೆ ಹರಡಿದ್ದ ದರ್ಭೆ ಮುಂತಾದುವುಗಳನ್ನು ಬಚ್ಚಲಿಗೆ ಹಾಕುವುದು.

(ಅಕ್ಕಿಟ್ಟಿನ ವಿಷ್ಣುಪಾದವನ್ನು ತೊಳೆದು ದೇವರಮನೆಯಲ್ಲಿಡುವುದು. ಪಿಂಡ ಇಟ್ಟಿದ್ದ ಸ್ಥಳವನ್ನು ಕೈಯಲ್ಲಿ ಗುಡಿಸಿ, ಬಿದ್ದ ಯವ, ಎಳ್ಳುಕಾಳುಗಳು ಮುಂತಾದವುಗಳನ್ನೆಲ್ಲಾ ಅರಳಿನ ಚಿಟ್ಟಿಗೇ ಹಾಕುವುದು.) (ಪಿಂಡಕ್ಕೆ ನೈವೇದ್ಯವಾದ ಭಕ್ಷ್ಯಗಳನ್ನು ಎಲ್ಲಾ ಚಿರಂಜೀವಿಗಳಿಗೆ ಪಿತೃಪ್ರಸಾದವೆಂದು ಹಂಚಿಸುವುದು.)

ಪಿಂಡಸ್ಥಾನೇ ಚತುರಶ್ರ ಮಂಡಲಂ ಕೃತ್ವಾ । ಚತುರ್ದಿಕ್ಷು ಯವಾನ್ನಿಕ್ಷಿಪ್ಯ ॥

ಪಿಂಡ ಇಟ್ಟಿದ್ದ ಸ್ಥಳದಲ್ಲಿ ಚತುರಾಕಾರದ ಮಂಡಲಮಾಡಿ 4 ಮೂಲೆಗಳಲ್ಲೂ ಅಕ್ಕಿಕಾಳು ಇಡುವುದು.

ಪಿಂಡಸ್ಥಾನೇ ಸ್ವಸ್ತಿ ಶೋಭನಂ ಹವಿಃ ।

ಶಾಂತಿರಸ್ತು । ಪುಷ್ಟಿರಸ್ತು । ತುಷ್ಟಿರಸ್ತು । ಧನಧಾನ್ಯಸಮೃದ್ಧಿರಸ್ತು ॥

ಈ ಪಿಂಡಸ್ಥಾನ ಮಂಡಲದ ಮೇಲೆ ಕಲಶದ ನೀರಿನಿಂದ ಕೂರ್ಚದಲ್ಲಿ ಪ್ರೋಕ್ಷಿಸುವುದು ಮತ್ತು ಆ ನೀರನ್ನು ಈ ಮಂತ್ರಗಳಿಂದ ತಾನೂ ಪ್ರೋಕ್ಷಿಸಿಕೊಳ್ಳುವುದು.

ಸ್ವಸ್ಥಾನೇ ವಾಸಃ । ಪುನರಪಿ ಸ್ವಸ್ಥಾನಮ್ ॥

ತನ್ನ ಎಡಗಡೆ ಪಿಂಡ ಸಮೇತ ಇರುವ ಅರಕಿನ ಚಿಟ್ಟಿಯನ್ನು, ಮೊದಲು ಪಿಂಡಪ್ರದಾನ ಮಾಡಿದ ಸ್ಥಳಕ್ಕೆ ತರುವುದು. ಪುನಃ ಅದನ್ನು ಇದ್ದ ಸ್ಥಳದಲ್ಲೇ ಇಡುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಪಿತೃ (ಮಾತೃ) ಸ್ಥಾನೀಯ ಬ್ರಾಹ್ಮಣ ಹಸ್ತೇ - ಏಕಂ ದ್ವೇ ತ್ರೀಣಿ ಚತ್ವಾರಿ ಪಂಚ ಷಟ್ ಇತಿ ಹಸ್ತೋದಕಂ ದತ್ವಾ ॥

ಪಿತೃಸ್ಥಾನದ ಬ್ರಾಹ್ಮಣನಿಗೆ ಈ ಮಂತ್ರದಿಂದ 6 ಸಾರಿ ಕೂರ್ಚದಲ್ಲಿ ಹಸ್ತೋದಕ ಕೊಡುವುದು.

ಜಲಂ ತಿಲಂ ಜಲಂ ದರ್ಭಂ ಜಲಮಕ್ಷತಮೇವ ಚ ।
ಪುನರೇವ ಜಲಂ ದದ್ಯಾತ್ ಹಸ್ತಶುದ್ಧಿರ್ಭವಿಷ್ಯತಿ ॥

ಗಂಧಾಃ ಪಾಂತು, ದರ್ಭಾಃ ಪಾಂತು, ಅಕ್ಷತಾಃ ಪಾಂತು, ತಿಲಾಃ ಪಾಂತು ।

ಆತನಿಗೆ ಗಂಧ ದರ್ಭೆ, ಯವಾಕ್ಷತೆ, ತಿಲಗಳನ್ನು ಮುಟ್ಟಿಸುವುದು. ಪ್ರತಿ ಸಾರಿ ಮುಟ್ಟಿಸುವಾಗಲೂ ಒಂದು ಸಾರಿ ಕೂರ್ಚದಲ್ಲಿ ಹಸ್ತೋದಕ ಕೊಡುವುದು.

ಸವ್ಯೇನ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ವಿಶ್ವೇದೇವ ಬ್ರಾಹ್ಮಣ ಹಸ್ತೇ ಏಕಂ, ದ್ವೇ, ತ್ರೀಣಿ, ಚತ್ವಾರಿ, ಪಂಚ, ಷಟ್ ಇತಿ ಹಸ್ತೋದಕಂ ದತ್ವಾ ॥

ವಿಶ್ವೇದೇವರ ಸ್ಥಾನದ ಬ್ರಾಹ್ಮಣನಿಗೆ ಕೂರ್ಚದಿಂದ 6 ಸಾರಿ ಹಸ್ತೋದಕ ಕೊಡುವುದು.

ಗಂಧಾಃ ಪಾಂತು, ದರ್ಭಾಃ ಪಾಂತು, ಅಕ್ಷತಾಃ ಪಾಂತು ॥

ವಿಶ್ವೇದೇವರ ಸ್ಥಾನದ ಬ್ರಾಹ್ಮಣನಿಗೆ ಗಂಧ, ದರ್ಭೆ, ಅಕ್ಷತಗಳನ್ನು ಮುಟ್ಟಿಸುವುದು.

ಗೋತ್ರೋತ್ಪನ್ನೋಽಹಮಭಿವಾದಯೇ । ಇತಿ ವಿಪ್ರಪಾದೇಷ್ವಕ್ಷತಾನ್ ಸಮರ್ಪ್ಯ ॥

ಪ್ರವರಪೂರ್ವಕವಾಗಿ ಇಬ್ಬರು ಬ್ರಾಹ್ಮಣರಿಗೂ ಅಕ್ಕಿ ಅರ್ಚನೆ ಮಾಡಿ, ಮೊದಲು ವಿಶ್ವೇದೇವರಿಗೆ, ಆಮೇಲೆ ಪಿತೃ ಸ್ಥಾನದ ಬ್ರಾಹ್ಮಣನಿಗೆ, ನಮಸ್ಕರಿಸುವುದು. ಅನಂತರ ಬೊಗಸೆಯೊಡ್ಡಿ ಅವರಿಂದ ಅಕ್ಕಿ ಪ್ರಸಾದ ಸ್ವೀಕರಿಸುವುದು.

ವಿಶ್ವೇದೇವ ಪ್ರಸಾದೋಽಸ್ತು । ಪಿತೃಪಿತಾಮಹ ಪ್ರಪಿತಾಮಹಾನಾಂ (ಮಾತೃ, ಪಿತಾಮಹಿ, ಪ್ರಪಿತಾಮಹೀನಾಂ) ಪ್ರಸಾದೋಽಸ್ತು । ಕಿಂಚಿತ್ ಶಿರಸಿ ಧಾರಯ ।

ಸ್ವಲ್ಪವನ್ನು ಕರ್ತೃವು ತನ್ನ ತಲೆಯ ಮೇಲೆ ಹಾಕಿಕೊಂಡು ಉಳಿದುದನ್ನು ಶ್ರಾದ್ಧ ಸಾಮಗ್ರಿ ಇರಿಸಿದ್ದ ಬಾಳೆ ಎಲೆಯ ಮೇಲೆ ಇಡುವುದು.

ಭೋಜನ ಪಾತ್ರಾಣ್ಯುಚ್ಚಾಲಯಿಷ್ಯೇ ।

'ಅಪ್ಪಣೆಯಾದರೆ ಊಟವಾದ ಎಲೆ ತೆಗೆಯುತ್ತೇನೆ' ಎನ್ನಬೇಕು.

ಉಚ್ಚಾಲಯ ।

ಬ್ರಾಹ್ಮಣರು 'ತೆಗೆಯಬಹುದು' ಎನ್ನುವರು.

ಊಟವಾದ ವಿಶ್ವೇದೇವರ ಎಲೆಗೆ ಸ್ವಲ್ಪ ಅಕ್ಕಿಕಾಳನ್ನೂ ಪಿತೃಸ್ಥಾನದ ಎಲೆಗೆ ತಿಲವನ್ನೂ ಶಬ್ದವಾಗದಂತೆ ಉದುರಿಸಬೇಕು. ಇದು ಎಲೆ ತೆಗೆಯಲು ಚಿಹ್ನೆ. ಸ್ಕಾಂದದಲ್ಲಿ ಎಲೆಯನ್ನು ಕರ್ತೃವೇ ತೆಗೆಯಬೇಕೆಂದಿದೆ, "ನ ಸ್ತ್ರೀಭಿರ್ನ ಚ ಬಾಲೇನ ನಾನ್ಯೇನೈವ ಚ ಕೇನಚಿತ್ । ಶ್ರಾದ್ಧೀಯ ವಿಪ್ರಪಾತ್ರಾಂ ಚ ಸ್ವಯಮೇವ ಪ್ರಚಾಲಯೇತ್ ॥" ಎಂಬ ವಚನವಿದೆ.

ದೇವಾಶ್ಚ ಪಿತರಃ ಸ್ವಸ್ತೀತಿ ಬ್ರೂತ ಸ್ವಸ್ತೀತಿ ಬ್ರೂತ ।

ಬ್ರಾಹ್ಮಣರಿರಾ । ನೀವು ನಮಗೆ ಶುಭವನ್ನು ಹೇಳಿ, ಶುಭವನ್ನು ಹೇಳಿ ಎನ್ನಬೇಕು.

ಸ್ವಸ್ತಿ ಸ್ವಸ್ತಿ ।

ಅದಕ್ಕೆ ಅವರು ಎರಡು ಬಾರಿ ಶುಭ, ಶುಭ ಎನ್ನಬೇಕು.

ಪುರೂರವಾರ್ದ್ರವ ಸಂಜ್ಞಕಾನಾಂ ವಿಶ್ವೇಷಾಂ ದೇವಾನಾಂ ಮಯಾ ದತ್ತಂ ಶ್ರಾದ್ಧೀಯಮನ್ನಮುದಕಂ ಅಕ್ಷಯಮಸ್ತ್ವಿತಿಬ್ರೂತ ಅಕ್ಷಯಮಸ್ತ್ವಿತಿಬ್ರೂತ । ಇತಿ ಬ್ರಾಹ್ಮಣ ಹಸ್ತೇ ಯವೋದಕಂ ದದ್ಯಾತ್ ॥

ವಿಶ್ವೇದೇವತೆಗಳೆ । 'ನಾನು ಶ್ರಾದ್ಧದಲ್ಲಿ ಅರ್ಪಿಸಿದ ಅನ್ನೋದಕಗಳು ಅಕ್ಷಯ ಫಲಪ್ರದವಾಗಲಿ' ಎಂದು ಕೇಳಿಕೊಂಡು ಎರಡು ಸಾರಿ ಉದ್ಧರಣೆಯಲ್ಲಿ, ಅಕ್ಕಿಗೆ ಕಲಶದ ನೀರು ಹಾಕಿಕೊಂಡು ವಿಶ್ವೇದೇವ ಬ್ರಾಹ್ಮಣನ ಕೈಗೆ (ಅಕ್ಷಯೋದಕ) ಬಿಡುವುದು.

ಅಸ್ತ್ವಕ್ಷಯಂ ಅಸ್ತ್ವಕ್ಷಯಮ್ ।

ಆ ಬ್ರಾಹ್ಮಣನು 'ಅಕ್ಷಯೋದಕ ಸಂದಿತು' ಎನ್ನಬೇಕು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಪಿತೃ, ಪಿತಾಮಹ, ಪ್ರಪಿತಾಮಹಾನಾಂ ..... ಗೋತ್ರಾಣಾಂ (ಮಾತೃ, ಪಿತಾಮಹಿ, ಪ್ರಪಿತಾಮಹೀನಾಂ ..... ಗೋತ್ರಾಣಾಂ) ...... ಶರ್ಮಣಾಂ ವಸು ರುದ್ರ ಆದಿತ್ಯ ರೂಪಾಣಾಂ (..... ದಾಯಿನಾಂ ವಸು ರುದ್ರ ಆದಿತ್ಯರೂಪಾಣಾಂ) ಮಯಾ ದತ್ತಂ ಶ್ರಾದ್ಧೀಯಮನ್ನಮುದಕಂ ಚ, ಅಕ್ಷಯಮಸ್ತ್ವಿತಿ ಬ್ರೂತ । ಏವಂ ತ್ರಿಃ । ಇತಿ ಬ್ರಾಹ್ಮಣ ಹಸ್ತೇ ತಿಲೋದಕಂ ದದ್ಯಾತ್ ॥

"ಪಿತೃಗಣಗಳೇ, ನಾನು ಶ್ರಾದ್ಧದಲ್ಲಿ ಕೊಟ್ಟ ಅನ್ನೋದಕಗಳು ಅಕ್ಷಯ ಫಲ ಕೊಡಲಿ" ಎಂದು 3 ಸಾರಿ ಹೇಳಿ, ಪಿತೃ ಸ್ಥಾನದ ಬ್ರಾಹ್ಮಣನ ಕೈಗೆ ಉದ್ಧರಣೆಯಿಂದ ಕಲಶೋದಕದ ನೀರನ್ನು ತೆಗೆದುಕೊಂಡು ಎಳ್ಳಿಗೆ ಹಾಕಿಕೊಂಡು, ಎಳ್ಳು, ನೀರು ಬಿಡುವುದು.

ಅಸ್ತ್ವಕ್ಷಯಂ, ಅಸ್ತ್ವಕ್ಷಯಂ, ಅಸ್ತ್ವಕ್ಷಯಮ್ ॥

ಪಿತೃಸ್ಥಾನದ ಬ್ರಾಹ್ಮಣನು ಅಕ್ಷಯ ಫಲಪ್ರಾಪ್ತಿಯಾಗುವುದೆಂದು 3 ಸಾರಿ ಹೇಳಬೇಕು.

ಉಪವೀತಿ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಉಪವಿಷ್ಟೇಭ್ಯೋ ಬ್ರಾಹ್ಮಣೇಭ್ಯಃ ಶ್ರಾದ್ಧ ಭೋಜನ ಸಾದ್ಗುಣ್ಯಾರ್ಥಂ ಯಥಾಶಕ್ತಿ ದಕ್ಷಿಣಾಂ ಪ್ರತಿಪಾದಯಿಷ್ಯೇ ॥

ಬ್ರಾಹ್ಮಣರಿಗೂ ದಕ್ಷಿಣೆಯನ್ನು ತುಳಸೀದಳ ಸಮೇತ ನೀರು ಹಾಕಿಕೊಡುವುದು. (ಮೊದಲು ಪಿತೃಸ್ಥಾನದ ಬ್ರಾಹ್ಮಣನಿಗೆ, ಆಮೇಲೆ ವಿಶ್ವೇದೇವರ ಸ್ಥಾನದ ಬ್ರಾಹ್ಮಣನಿಗೆ ಕೊಡಬೇಕು. ಸುವಾಸಿನಿ ಶ್ರಾದ್ಧದಲ್ಲಿ ಸುವಾಸಿನಿಗೆ ತಾಂಬೂಲ ಪುಷ್ಪ ಸಮೇತ ದಕ್ಷಿಣೆಯನ್ನು ಕರ್ತೃವಿನ ಪತ್ನಿಯ ಮೂಲಕ ಕೊಡಿಸಬೇಕು).

ದಕ್ಷಿಣಾಃ ಪಾಂತು । ಪಾಂತು ದಕ್ಷಿಣಾಃ ।

ಬ್ರಾಹ್ಮಣರು ''ದಕ್ಷಿಣೆ ಸಂದಿತು'' ಎನ್ನಬೇಕು.

ಸ್ವಾಹಾಂ ವಾಚಯಿಷ್ಯೇ । ಸ್ವಧಾಂ ವಾಚಯಿಷ್ಯೇ ॥

ಸ್ವಧಾಮಂತ್ರವನ್ನು ಹೇಳುತ್ತೇನೆ ಎನ್ನಬೇಕು ಕರ್ತೃ.

ವಾಚ್ಯತಾಂ ।

ಅದಕ್ಕೆ ಬ್ರಾಹ್ಮಣರು 'ಹೇಳಬಹುದು' ಎನ್ನಬೇಕು.

ಋಚೇತ್ವಾ ರುಚೇತ್ವಾ ಸಮಿಥ್ಸ್ರವಂತಿ ಸರಿತೋ ನ ಧೇನಾಃ । ಅಂತರ್ ಹೃದಾ ಮನಸಾ ಪೂಯಮಾನಾಃ । ಘೃತಸ್ಯ ಧಾರಾ ಅಭಿಚಾಕಶೀಮಿ । ಹಿರಣ್ಯಯೋ ವೇತಸೋ ಮಧ್ಯ ಆಸಾಂ । ತಸ್ಮಿನ್ ಥ್ಸುಪರ್ಣೋ ಮಧುಕೃತ್ಕುಲಾಯೀ ಭಜನ್ನಾಸ್ತೇ ಮಧುದೇವತಾಭ್ಯಃ । ತಸ್ಯಾಸತೇ ಹರಯಃ ಸಪ್ತತೀರೇ ಸ್ವಧಾಂ ದುಹಾನಾ ಅಮೃತಸ್ಯ ಧಾರಾಮ್ ॥

ಈ ರೀತಿ ಸ್ವಧಾವಾಚನ ಮಾಡಬೇಕು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಅಸ್ಮತ್ ಪಿತೃ, ಪಿತಾಮಹ, ಪ್ರಪಿತಾಮಹೇಭ್ಯಃ (ಅಸ್ಮನ್ಮಾತೃ, ಪಿತಾಮಹಿ, ಪ್ರಪಿತಾಮಹೀಭ್ಯಃ) ಸ್ವಧೋಚ್ಯತಾಮಿತಿ ಭವಂತೋ ಬ್ರುವಂತು ॥

ಓಂ ಸ್ವಧಾ । ಸಂಪದ್ಯಂತಾಗ್ಂ ಸ್ವಧಾ ।

ಮೇಲೆ ಪಠಿಸಿದಂತೆ ಸ್ವಧಾಮಂತ್ರವನ್ನು ಹೇಳಿರುತ್ತೇನೆ.

ಅಸ್ತು ಸ್ವಧಾ । ಸ್ವಧಾಸ್ಸಂಪದ್ಯಂತಾಮ್ ॥

'ಸಂಪದ್ಯಂತವಾಗಿ ಸ್ವಧಾ ಆಯಿತು' ಎಂದು ಬ್ರಾಹ್ಮಣರು ಹೇಳಬೇಕು.

ಸವ್ಯಮ್ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ವಿಶ್ವೇದೇವಾಃ ಪ್ರೀಯಂತಾಂ - ಪ್ರೀಯಂತಾಂ ವಿಶ್ವೇದೇವಾಃ ।

ಪಿತೃಗಳಿಗೆ ಸ್ವಧಾರೂಪದಿಂದ ಕೊಟ್ಟ ಅನ್ನೋದಕಗಳು ಸಂಪದ್ಭರಿತ ಫಲ ಕೊಡಲಿ, ವಿಶ್ವೇದೇವರು ತೃಪ್ತರಾಗಲಿ ಎಂದು ಹೇಳುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಪಿತೃ, ಪಿತಾಮಹ, ಪ್ರಪಿತಾಮಹಾಶ್ಚ (ಮಾತೃ, ಪಿತಾಮಹಿ, ಪ್ರಪಿತಾಮಹ್ಯಶ್ಚ) ಪ್ರೀಯಂತಾಮ್ ।

ಪಿತೃಸ್ಥಾನದ ಬ್ರಾಹ್ಮಣನ ಕೈಗೆ ಎಳ್ಳು, ನೀರಿನಿಂದ ಅರ್ಘ್ಯವನ್ನು ಬಿಡುವುದು.

ಸವ್ಯೇನ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಆ ಮಾ ವಾಜಸ್ಯ ಪ್ರಸವೋ ಜಗಮ್ಯಾ ದಾ ದ್ಯಾ ವಾ ಪೃಥಿವೀ ವಿಶ್ವಶಂಭೂ । ಆ ಮಾ ಗಂತಾಂ ಪಿತರಾ ಮಾತರಾ ಚಾಮಾ ಸೋಮೋ ಅಮೃತತ್ವಾಯ ಗಮ್ಯಾತ್ । ದಾತಾರೋ ನೋಽಭಿವ ರ್ಧಂತಾಂ ವೇದಸಂತತಿರೇವ ನಃ । ಶ್ರದ್ಧಾ ಚ ನೋ ಮಾವ್ಯಗಮದ್ಬಹುದೇಯಂ ಚ ನೋಽಸ್ತು । ಅನ್ನಂ ಚ ನೋ ಬಹು ಭವೇತ್ । ಅತಿಥೀಗ್ಂಶ್ಚ ಲಭೇಮಹಿ । ಯಾಚಿತಾರಶ್ಚ ನಸ್ಸಂತು । ಮಾ ಚ ಯಾಚಿಷ್ಮ ಕಂಚನ ॥

''ಆ ಮಾ ವಾಜಸ್ಯ .... ತತ್ವಾಯ ಗಮ್ಯಾತ್''ವರೆಗಿನ ಮಂತ್ರವನ್ನು ಹೇಳುತ್ತಾ ಕರ್ತೃವು ಬ್ರಾಹ್ಮಣರ ಮುಂದೆ ಕೈ ಜೋಡಿಸಿ ನಿಲ್ಲಬೇಕು.

''ದಾತಾರೋ ನೋಽಭಿವರ್ಧತಾಂ ..... ಚಿಷ್ಮ ಕಂಚನ'' ವರೆಗಿನ ಮಂತ್ರದಿಂದ ಬ್ರಾಹ್ಮಣರನ್ನು ವರ ಯಾಚಿಸಬೇಕು.

(ಈ ಮಂತ್ರ ಹೇಳುವುದಕ್ಕೆ ಹಿಂದೆಯೇ 'ವಾಜೇ ವಾಜೇ....' ಮಂತ್ರದಿಂದ ಪಿತೃ ಉದ್ವಾಸನೆಯನ್ನೂ ಮಾಡಿ, ಪಿತೃಗಳನ್ನು ಏಳಿಸಿಬಿಟ್ಟರೆ ಅವರಿಗೆ ಇನ್ನೂ ಸಲ್ಲಬೇಕಾದ ಅನೇಕ ಕಲಾಪಗಳು (ಉಪಚಾರಗಳು) ಸಮಂಜಸವಾಗಿ ನೆರವೇರಲು ಕಷ್ಟವಾಗುತ್ತದೆ. ಮುಂದೆ ಅವರಿಗೆ ನಮಸ್ಕರಿಸಿ, ಅವರಿಂದ ಕರ್ತೃವು ತನ್ನ ಉತ್ತರೀಯದ ತುದಿಯಿಂದ ಮಂತ್ರಾಕ್ಷತೆಯನ್ನು ಪಡೆಯಬೇಕು. ಅವರಿಗೆ ತಾಂಬೂಲ ಸಮರ್ಪಣೆಯಾಗಬೇಕು. ಗಂಧದಿಂದ ಅವರ ಪಾದಮರ್ದನವಾಗಬೇಕು. ಆದಕಾರಣ 'ವಾಜೇ ವಾಜೇ' ಮಂತ್ರವನ್ನು ಈಗ ಹೇಳುವುದಕ್ಕೆ ಆಗುವುದಿಲ್ಲ. ಅದನ್ನು ಮುಂದೆ ತೋರಿಸಿದೆ).

ದಾತಾರೋ ನೋಭಿವರ್ಧಂತಾಂ .......... ನೋಽಸ್ತು ।

ಈ ಮಂತ್ರದಿಂದ ಬ್ರಾಹ್ಮಣರು ವರವನ್ನು ದಯಪಾಲಿಸಬೇಕು.

(ಒಟ್ಟಿನಲ್ಲಿ ಕರ್ತೃವು "ನನ್ನ ಗೋತ್ರವು ವರ್ಧಿಸಲಿ. ನನಗೆ ದಾನ ಮಾಡುವವರು ಹೆಚ್ಚಲಿ. ನನ್ನ ವೇದಗಳೂ ಸಂತತಿಯೂ ವೃದ್ಧಿ ಹೊಂದಲಿ. ನನ್ನ ಶ್ರದ್ಧೆಯು ಅಳಿಯದಿರಲಿ. ನನ್ನ ಈ ದಾನವು ಬಹಳವಾಗಲಿ. ನನಗೆ ಅನ್ನಾದಿಗಳು ಬಹಳವಾಗಿ ಲಭಿಸಲಿ. ನನ್ನನ್ನು ಬಹುಮಂದಿ ಯಾಚಿಸಲಿ. ಯಾರನ್ನೂ ನಾನು ಯಾಚಿಸದಂತಾಗಲಿ. ಈ ಆಶೀರ್ವಾದವು ಪಿತೃಗಳಿಂದ ನನಗೆ ಲಭಿಸಲಿ" ಎಂದು ಪಿತೃಗಳನ್ನು ಪ್ರಾರ್ಥಿಸುವುದು ಈ ಮಂತ್ರದಿಂದ).

ಅನ್ನಶೇಷೈಃ ಕಿಂ ಕ್ರಿಯತಾಮ್ ।

ಬ್ರಾಹ್ಮಣ ಭೋಜನಾ ನಂತರ ಪಾಕಶಾಲೆಯಲ್ಲಿ ಉಳಿದ ಭಾಗವನ್ನು ಹೇಗೆ ವಿನಿಯೋಗ ಮಾಡಲಿ ಎಂದು ಕರ್ತೃವು ಬ್ರಾಹ್ಮಣರನ್ನು ಕೇಳಬೇಕು.

ಇಷ್ಟೈಸ್ಸಹ ಭುಂಜತಾಮ್ ।

ಅದಕ್ಕೆ ಅವರು 'ನಿನ್ನ ಇಷ್ಟಬಂಧುಗಳೊಡನೆ ಭುಂಜಿಸು' ಎಂದು ಅನುಜ್ಞೆ ಕೊಡಬೇಕು.

ಸ್ವಾದುಷಗ್ಂ ಸದಃ ಪಿತರೋ ವಯೋಧಾಃ ಕೃಚ್ಛ್ರೇ ಶ್ರಿತಃ ಶಕ್ತೀವಂತೋ ಗಭೀರಾಃ । ಚಿತ್ರಸೇನಾ ಇಷು ಬಲಾ ಅಮೃದ್ಧ್ರಾಸ್ಸತೋವೀರಾ ಉರವೋ ವ್ರಾತಸಾಹಾಃ ।

ಈ ಮಂತ್ರದಿಂದ ವಿಶ್ವೇದೇವ ಪಿತೃಗಳನ್ನು ಹೊಗಳುವುದು.

ಬ್ರಾಹ್ಮಣಾಸಃ ಪಿತರಃ ಸೋಮ್ಯಾಸಃ । ಶಿವೇನೋ ದ್ಯಾವಾ ಪೃಥಿವೀ ಅನೇಹಸಾ । ಪೂಷಾ ನಃ ಪಾತು ದುರಿತಾ ದೃತಾ ವೃಧೋ ರಕ್ಷಾ ಮಾಕಿರ್ನೋ

ಅಘಶಗ್‌ಂಸ ಈಶತ । ಇಹೈವಸ್ತಂ ಮಾವಿಯೋಷ್ಟಂ ವಿಶ್ವಮಾಯುರ್ವ್ಯಶ್ನುತಮ್ ।

ಕ್ರೀಡಂತು ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇ ಗೃಹೇ ॥

ಆಯುಃ ಪ್ರಜಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ ।

ಪ್ರಯಚ್ಛಂತು ತಥಾ ರಾಜ್ಯಂ ಪ್ರೀತ್ಯಾ ನೃಣಾಂ ಪಿತಾಮಹಾಃ ॥

ಸತ್ಯಾ ಏತಾ ಆಶಿಷಸ್ಸಂತು ॥

ಗೋತ್ರಾಭಿವೃದ್ಧಿರಸ್ತು । ವಂಶಾಭಿವೃದ್ಧಿರಸ್ತು । ವಿಶ್ವೇದೇವ ಪ್ರಸಾದೋಽಸ್ತು । ಪಿತೃ, ಪಿತಾಮಹ, ಪ್ರಪಿತಾಮಹಾನಾಂ (ಮಾತೃ, ಪಿತಾಮಹಿ, ಪ್ರಪಿತಾಮಹೀನಾಂ) ಪ್ರಸಾದೋಽಸ್ತು ॥

ಬಲಗಡೆ ಹೆಗಲ ಮೇಲೆ ಉತ್ತರೀಯವನ್ನು ಹಾಕಿಕೊಂಡು ವಿಶ್ವೇದೇವರ ಸ್ಥಾನದ ಬ್ರಾಹ್ಮಣನ ಪಾದಗಳಿಗೆ ನಮಸ್ಕರಿಸಿ ಉತ್ತರೀಯದ ತುದಿಯಿಂದ ಅಕ್ಕಿ ಅಕ್ಷತೆ ಪ್ರಸಾದವನ್ನು ಆತನಿಂದ ಸ್ವೀಕರಿಸುವುದು. ಅದನ್ನು, ಶ್ರಾದ್ಧ ಸಾಮಗ್ರಿಗಳನ್ನು ಇಟ್ಟುಕೊಂಡಿರುವ ಅಗ್ರದ ಬಾಳೆಎಲೆಯ ಮೇಲೆ ಬೊಗಸೆಯೊಡ್ಡಿ ಅವರಿಂದ ಮೊದಲು ಪಡೆದ ಅಕ್ಕಿಕಾಳು ಪ್ರಸಾದ ದೊಡನೆ ಇಡುವುದು.

ಬ್ರಾಹ್ಮಣರು "ಗೋತ್ರಾಭಿವೃದ್ಧಿಯಾಗಲಿ. ವಿಶ್ವೇದೇವ, ಪಿತೃಗಳ ಪ್ರಸಾದ ಸಿಕ್ಕಲಿ" ಎಂದು ಕರ್ತೃವನ್ನು ಹರಸಬೇಕು.

ಬ್ರಾಹ್ಮಣಾನಾಂ ತಾಂಬೂಲಾನಿ ದತ್ವಾ ।

ಬ್ರಾಹ್ಮಣರುಗಳಿಗೆ ತಾಂಬೂಲ ಸಮರ್ಪಣೆ ಮಾಡಬೇಕು.

ಕೊಡುವಾಗ ತಾಂಬೂಲವನ್ನು ಕೈಯಿಂದಲೇ ಕೊಡುವುದು. ತಟ್ಟೆ ಮುಂತಾದುವು ಬೇಕಿಲ್ಲ. (5 ವೀಳ್ಯದೆಲೆ, 5 ಬಟ್ಟಲಡಕೆಗಳನ್ನು, ಒಂದು ಚೋಟು ಕಟ್ಟಿದ ಹೂವನ್ನೂ, ಪ್ರತಿ ತಾಂಬೂಲಕ್ಕೂ ಇಟ್ಟುಕೊಳ್ಳುವುದು). ಮೊದಲು ವಿಶ್ವೇದೇವರಿಗೆ, ಆಮೇಲೆ ಪಿತೃಸ್ಥಾನದ ಬ್ರಾಹ್ಮಣನಿಗೆ ಕೊಡಬೇಕು.

ಸ್ವಯಂ ಶೇಷ ಗಂಧಂ ಧಾರಯೇತ್ । ಶೇಷಾಕ್ಷತಾನ್ ಧೃತ್ವಾ ।

ಗಂಧದ ದೊನ್ನೆಯಲ್ಲಿ ಉಳಿದಿರುವ ಸ್ವಲ್ಪ ಗಂಧವನ್ನು ಕರ್ತೃವು ತನ್ನ ಹಣೆಗೆ ಹಚ್ಚಿಕೊಂಡು, ಅದರ ಮೇಲೆ, ಶ್ರಾದ್ಧ ಸಾಮಗ್ರಿ ಎಲೆಯಲ್ಲಿ ಇಟ್ಟುಕೊಂಡಿರುವ ಪ್ರಸಾದದ ಅಕ್ಕಿಯನ್ನು ಹಚ್ಚಿಕೊಳ್ಳುವುದು. ಆಮೇಲೆ ಆ ಗಂಧವನ್ನು ಬೇರೆ ಯಾರೂ ಹಚ್ಚಿಕೊಳ್ಳಬಾರದು.

ಪವಿತ್ರಂ ವಿನಾ ।

ಪವಿತ್ರವನ್ನು ತೆಗೆದು ಬಲ ಕಿವಿಗೆ ಸಿಕ್ಕಿಸಿಕೊಳ್ಳುವುದು.

ಅದ್ಯ ಮೇ ಸಫಲಂ ಜನ್ಮ ಭವತ್ಪಾದಾಬ್ಜ ವಂದನಾತ್ ।
ಅದ್ಯ ಮೇ ವಂಶಜಾಸ್ಸರ್ವೇ ಯಾತಾವೋನುಗ್ರಹಾದ್ದಿವಮ್ ॥
ಪತ್ರ ಶಾಕಾದಿ ದಾನೇನ ಕ್ಲೇಶಿತಾ ಯೂಯಮೀದೃಶಾಃ ।
ತತ್ಕ್ಲೇಶಜಾತಂ ಚಿತ್ತೇ ತು ವಿಸ್ಮೃತ್ಯ ಕ್ಷಂತುಮರ್ಹಥ ॥

ಈ ಶ್ಲೋಕವನ್ನು ಹೇಳಿಕೊಂಡು, ತನ್ನ ಎರಡು ಅಂಗೈಗಳಿಗೂ ದೊನ್ನೆಯ ಗಂಧವನ್ನು ಸವರಿಕೊಂಡು ಬ್ರಾಹ್ಮಣರ ಎರಡು ಪಾದಗಳಿಗೂ ಮರ್ದನ ಮಾಡುವುದು.

ಪವಿತ್ರಂ ಧೃತ್ವಾ ।

ಕಿವಿಗೆ ಸಿಕ್ಕಿಸಿಕೊಂಡಿದ್ದ ಪವಿತ್ರವನ್ನು ಬೆರಳಿಗೆ ಧರಿಸುವುದು.

ಸಾಕ್ಷಾದ್ವಸಿಷ್ಠ ವಾಮದೇವ ಸದೃಶಾಃ ಬ್ರಾಹ್ಮಣೋತ್ತಮಾಸ್ಸಮಾಗತಾಃ ।

ಪ್ರಾಚೀನಾವೀತಿ ॥

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳುವುದು.

ಅಸ್ಮತ್ ಪಿತುಃ (ಅಸ್ಮನ್ ಮಾತುಃ) ಪ್ರತಿಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧ ತಿಥಿಃ ಸೂರ್ಯೋಪರಾಗ ಸದೃಶೀ ಅಭೂತ್ ।

ತತ್ರ ಆಸನ ಭಾಜನ ಶಾಕ ಪಾಕ ಮಂತ್ರ ತಂತ್ರ ದ್ರವ್ಯ ದಕ್ಷಿಣಾದಿಭಿಃ ।

ಕಿಮಪಿ ನ ಸತ್ಕೃತಂ ಭವದ್ಭಿರೇವ ಸತ್ಕೃತಂ ।

ಮಯಾ ಕೃತ ಅಗ್ನೌಕರಣ, ಬ್ರಾಹ್ಮಣ ಭೋಜನ, ಪಿಂಡಪ್ರದಾನಾಖ್ಯಂ ಕರ್ಮತ್ರಯಂ ಯಥೋಕ್ತಂ ಭೂತ್ವಾ ಯಥಾ ಶಾಸ್ತ್ರೀಯಂ ಭೂತ್ವಾ, ಸಾಕ್ಷಾದ್ಗಯಾಶ್ರಾದ್ಧ ಫಲದಮಸ್ತ್ವಿತಿ ಭವಂತೋ ಬ್ರುವಂತು ।

"ನನ್ನ ತಂದೆಯ (ತಾಯಿಯ) ಶ್ರಾದ್ಧತಿಥಿಯು ಸೂರ್ಯಗ್ರಹಣದಲ್ಲಿ ಮಾಡಿದ ತಿಥಿಗೆ ಸಮಾನವಾಗಲಿ. ನನ್ನ ಕಾರ್ಯಗಳಲ್ಲಿ ನ್ಯೂನಾತಿರಿಕ್ತಗಳಿದ್ದರೆ ಬ್ರಾಹ್ಮಣರಾದ ನೀವು ಸರಿಪಡಿಸಿ. ಸಾಕ್ಷಾತ್ ವಸಿಷ್ಠವಾಮದೇವರಂಥ ವಿಪ್ರರು ನೀವು ಬಂದಿದ್ದೀರಿ. ನಾನು ಮಾಡಿದ ಶ್ರಾದ್ಧವು ಗಯಾಶ್ರಾದ್ಧ ಫಲ ಕೊಡಲಿ" ಎಂದು ಬ್ರಾಹ್ಮಣರನ್ನು ಕೇಳಿಕೊಳ್ಳುವುದು.

ಸಾಕ್ಷಾದ್ಗಯಾ ಶ್ರಾದ್ಧ ಫಲದಮಸ್ತು । ಯಥಾ ಶಾಸ್ತ್ರೀಯಮಸ್ತು ।

ಬ್ರಾಹ್ಮಣರು 'ಸಾಕ್ಷಾತ್ ಗಯಾಶ್ರಾದ್ಧವೇ ಆಯ್ತು' ಎನ್ನಬೇಕು.

ಸವ್ಯೇನ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಯನ್ಮಯಾ ವಿಹಿತಂ ಶ್ರಾದ್ಧಂ ಪರಿಪೂರ್ಣಂ ತದಸ್ತು ತೇ ।

ಅನೇನ ಏಷ ಪಿತೃ (ಮಾತೃ) ಯಜ್ಞೇನ ಭಗವಾನ್ ಸರ್ವಾತ್ಮಕಃ । ಸರ್ವಂ ಶ್ರೀ ವಾಸುದೇವಃ ಪ್ರೀಣಾತು ॥

ನಾನು ಮಾಡಿದ ಶ್ರಾದ್ಧಕರ್ಮವು ಪರಿಪೂರ್ಣವಾಗಿ ಭಗವಾನ್ ಸರ್ವಾತ್ಮಕ

ಶ್ರೀ ವಾಸುದೇವನಿಗೆ ತೃಪ್ತಿಯಾಗಲಿ ಎಂದು ಕಲಶೋದಕವನ್ನು ಉದ್ಧರಣೆಯಿಂದ ತೆಗೆದು ಕೊಂಡು ನೆಲದ ಮೇಲೆ ಬಿಡುವುದು.

ಶ್ರಾದ್ಧ ಸಾದ್ಗುಣ್ಯಾರ್ಥಂ ನಾಮತ್ರಯ ಮಂತ್ರ ಜಪಂ ಕರಿಷ್ಯೇ । ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ । ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ । ಅಚ್ಯುತಾನಂತ ಗೋವಿಂದೇಭ್ಯೋ ನಮಃ ।

ಈ ನಾಮತ್ರಯ ಮಂತ್ರವನ್ನು ಶ್ರಾದ್ಧದ ಸಾದ್ಗುಣ್ಯಾರ್ಥವಾಗಿ ಮಾಡುವುದು.

ವಾಜೇ ವಾಜೇ ವತವಾಜಿನೋ ನೋ ಧನೇಷು । ವಿಪ್ರಾ ಅಮೃತಾ ಋತಜ್ಞಾಃ ।

ಅಸ್ಯಮಧ್ವಃ ಪಿಬತ ಮಾದಯಧ್ವಂ । ತೃಪ್ತಾಯಾತ ಪಥಿಭಿರ್ದೇವಯಾನೈಃ ॥

ಪಿತೃಗಳನ್ನು ಉದ್ವಾಸನೆ ಮಾಡುವುದು.

ಪ್ರಾಚೀನಾವೀತಿ ।

ಜನಿವಾರ ಎಡಕ್ಕೆ ಹಾಕಿಕೊಳ್ಳುವುದು.

ಉತ್ತಿಷ್ಠತ ಪಿತರಃ ।

ಈ ಮಂತ್ರದಿಂದ ಪಿತೃಸ್ಥಾನದ ವಿಪ್ರನ ಎಡಗೈಗೆ ಬಲಗೈಲಿದ್ದ ತುಂಡುದರ್ಭೆಗಳ ಭಾಗವನ್ನು ಸೋಕಿಸಿ ಕೆಳಕ್ಕೆ ಹಾಕುವುದು. ಈ ರೀತಿ ಪಿತೃಗಳನ್ನು ಆವಾಹಿತ ಸ್ಥಾನದಿಂದ ಏಳಿಸುವುದು.

ಸವ್ಯಮ್ ।

ಜನಿವಾರ ಬಲಕ್ಕೆ ಹಾಕಿಕೊಳ್ಳುವುದು.

ಅನುಗಚ್ಛಂತು ವಿಶ್ವೇದೇವೈಸ್ಸಹ ।

ಈ ಮಂತ್ರದಿಂದ ವಿಶ್ವೇದೇವರ ಸ್ಥಾನದ ವಿಪ್ರನ ಬಲಗೈಗೆ, ಎಡಗೈಲಿದ್ದ ಇನ್ನೊಂದು ಭಾಗವನ್ನು ಬಲಗೈಗೆ ತೆಗೆದುಕೊಂಡು ಸೋಕಿಸಿ, ಪಿತೃಗಳನ್ನು ಹಿಂಬಾಲಿಸಿ ಎಂದು ಹೇಳುತ್ತಾ ಕೆಳಕ್ಕೆ ಹಾಕುವುದು.

ಈ ಮಂತ್ರಗಳಿಂದ ಬ್ರಾಹ್ಮಣರನ್ನು ಕೈ ಹಿಡಿದು ಎಬ್ಬಿಸಿ ಪಾದಪ್ರಕ್ಷಾಳನೆ ಮಾಡಿದ ಹೊರ ಅಂಗಣಕ್ಕೆ ಕರೆದುಕೊಂಡು ಹೋಗುವುದು. ತಾನು ಉತ್ತರೀಯವನ್ನು ಬಲ ಹೆಗಲ ಮೇಲೆ ಹಾಕಿಕೊಂಡಿರುವುದು. ಅವರು ಹಾಗೆ ಬರುವಾಗ ಹೊರಾಂಗಣಕ್ಕೆ ಹೋಗುವ

---

ವಿಶೇಷ ವಿಷಯ :

(ಶ್ರಾದ್ಧ ನಿಮಂತ್ರಿತ ಬ್ರಾಹ್ಮಣನು ಮತ್ತು ಶ್ರಾದ್ಧ ಕರ್ತೃವು ಶ್ರಾದ್ಧದ ದಿನ ಸಾಯಂಕಾಲ ಸಂಧ್ಯಾವಂದನೆಗಾಗಿ ಪ್ರಾಣಾಯಾಮ ಸಂಕಲ್ಪಮಾಡಿ ಸಂಧ್ಯಾ ವಂದನ ಯೋಗ್ಯತಾಸಿದ್ಧ್ಯರ್ಥಂ, ಗಾಯತ್ರ್ಯಾ ದಶವಾರ ಅಭಿಮಂತ್ರಿತ ಜಲಪಾನಂ ಕರಿಷ್ಯೇ ಎಂದು ಹೇಳಿ ಹಸ್ತದಲ್ಲಿ ನೀರು ಹಾಕಿಕೊಂಡು, ಹತ್ತು ಬಾರಿ ಗಾಯತ್ರಿ ಜಪ ಮಾಡಿ, ಆ ನೀರನ್ನು ಸೇವಿಸಿ ಅನಂತರ ಸಂಧ್ಯಾವಂದನೆ ಮಾಡಬೇಕು.)

ಬಾಗಿಲಿನ ಹೊಸಲಿನ ಮೇಲೆ, ತನ್ನ ಬಲ ಹೆಗಲಿನ ಮೇಲಿದ್ದ ಚೌಕವನ್ನು ಹಾಕಿ, ಅವರಿಗೆ ಪಾದೋಪಚಾರ ಮಾಡುವುದು. ಅವರುಗಳ ಹಿಂದೆ ತಾನೂ ಹೋಗುವುದು.

ಅಷ್ಟಾವಷ್ಟಾವನ್ಯೇಷು ಧಿಷ್ಣಿಯೇಷೂಪದಧಾತ್ಯಷ್ಟಾ ಶಫಾಃ ಪಶವಃ ಪಶೂನೇವಾವರುಂಧೇ । ಷಣ್ಮಾರ್ಜಾಲೀಯೇ ಷಡ್ವಾಋತವಃ । ಋತವಃ ಖಲುವೈ ದೇವಾಃ ಪಿತರ ಋತೂನೇವ ದೇವಾನ್ ಪಿತೄನ್ ಪ್ರೀಣಾತಿ ।

ಈ ಮಂತ್ರವನ್ನು ಹೇಳಿ ಪಿತೃಗಳು ಪ್ರೀತರಾಗಲಿ ಎನ್ನುತ್ತಾ ಶ್ರಾದ್ಧಕರ್ತೃವು ಬ್ರಾಹ್ಮಣರ ಹಿಂದೆ ಕಲಶವನ್ನು ಉದ್ಧರಣೆ ಸಹಿತ ತೆಗೆದುಕೊಂಡು ಬರುವುದು.

ಬ್ರಾಹ್ಮಣರು ಹೊಸಲು ದಾಟಿಯಾದ ಮೇಲೆ ತಾನು ಹೊಸಲು ಮೇಲೆ ಹಾಕಿದ್ದ ತನ್ನ ಉತ್ತರೀಯವನ್ನು ತೆಗೆದುಕೊಂಡು, ಆ ಚೌಕದಲ್ಲಿನ ಬ್ರಾಹ್ಮಣರ ಪಾದದ ಧೂಳನ್ನು ತನ್ನ ತಲೆಯ ಮೇಲೆ ಕೊಡವಿಕೊಂಡು, ಆ ಚೌಕವನ್ನು ಪುನಃ ತನ್ನ ಬಲಗಡೆ ಹೆಗಲ ಮೇಲೆ ಹಾಕಿಕೊಳ್ಳುವುದು.

ವಾಮದೇವಾಯ ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಸ್ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ ॥

ಭಾಗಧೇಯೇ ನೈವೈನಂ ಪ್ರಣಯತಿ । ಬ್ರಾಹ್ಮಣ ಆರ್ಷೇಯ ಉದ್ಧರೇತ್ । ಬ್ರಾಹ್ಮಣೋ ವೈ ಸರ್ವಾ ದೇವತಾಃ ॥ ಸರ್ವಾಭಿರೇವೈನಂ ದೇವತಾಭಿ ರುದ್ಧರತಿ ॥

ಇತಿ ಬ್ರಾಹ್ಮಣಾನ್ ಪ್ರದಕ್ಷಿಣೀ ಕೃತ್ವಾ, ಪ್ರಣಮ್ಯ । ಏಷ ಪಿತೃ ಯಜ್ಞಃ । ತತ್ಸತ್ ಬ್ರಹ್ಮಾರ್ಪಣಮಸ್ತು ॥

ಎಡಗೈಲಿ ಕಲಶವನ್ನು ಹಿಡಿದುಕೊಂಡು ಬಲಗೈಲಿ ಅಕ್ಕಿ ಕಾಳು ತೆಗೆದುಕೊಂಡು ಅಂಗಳದಲ್ಲಿ ಬಂದು ನಿಂತಿರುವ ಬ್ರಾಹ್ಮಣರಿಗೆ ಮೂರು ಸಾರಿ ಈ ಮಂತ್ರ ಹೇಳಿಕೊಂಡು ಪ್ರದಕ್ಷಿಣೆ ಮಾಡಿ, ಕಳಶವನ್ನು ಅಂಗಳದಲ್ಲಿ ಬೋರಲು ಹಾಕಿ, ಬ್ರಾಹ್ಮಣರ ಪಾದಗಳಿಗೆ ಅಕ್ಕಿ ಕಾಳಿನಿಂದ ಪೂಜಿಸಿ ದೀರ್ಘದಂಡ ನಮಸ್ಕಾರ ಮಾಡುವುದು. (ಕಳಶದಲ್ಲಿದ್ದ ನಾಣ್ಯವನ್ನು ಪುರೋಹಿತರಿಗೆ ಕೊಡುವುದು).

ಕಯಾನಶ್ಚಿತ್ರ ಆಭುವ ದೂತೀ ಸದಾ ವೃಧಸ್ಸಖಾ । ಕಯಾ ಶಚಿಷ್ಠಯಾ ವೃತ ।

ಶತಮಾನಂ ಭವತಿ ಶತಾಯುಃ ಪುರುಷಃ ಶತೇಂದ್ರಿಯ ಆಯುಷ್ಯೇವೇಂದ್ರಿಯೇ

ಪ್ರತಿತಿಷ್ಠತಿ । ಗೋತ್ರಾಭಿವೃದ್ಧಿರಸ್ತು ॥

ಬ್ರಾಹ್ಮಣರು ಕರ್ತೃವಿನ ಮೇಲೆ ಅಕ್ಕಿ ಕಾಳುಗಳಿಂದ ಈ ಮಂತ್ರದಂತೆ ಆಶೀರ್ವದಿಸ ಬೇಕು.

ಪವಿತ್ರಂ ವಿಸೃಜ್ಯ ಪಾದೌ ಪ್ರಕ್ಷಾಳ್ಯ ಆಚಮ್ಯ ।

ಇದಾದ ಮೇಲೆ ಅಂಗಳದಲ್ಲಿ ದಕ್ಷಿಣಾಗ್ರವಾಗಿ ತಲೆಕೆಳಗಾಗಿ ಹಾಕಿದ್ದ ಬಾಳೆ ಎಲೆಯನ್ನು ಸರಿಮಾಡಿ, ಉತ್ತರಾಗ್ರವಾಗಿ ಹಾಕಿ, ಪವಿತ್ರವನ್ನು ಬಿಚ್ಚಿಹಾಕಿ ಪಾದಪ್ರಕ್ಷಾಳನೆ ಮಾಡಿ ಕೊಂಡು, ಆಚಮನ ಮಾಡಿ ಅಗ್ನಿಯ ಬಳಿಗೆ ಬರುವುದು.

(ಅಗ್ನಿಯು ಇದುವರವಿಗೂ ಸರಿಯಾಗಿ ಆರದೇ ಇರುವಂತೆ ನೋಡಿಕೊಳ್ಳುತ್ತಿರ ಬೇಕು)

ಶುಭಪವಿತ್ರಂ ಧೃತ್ವಾ । ಅಗ್ನಿರಕ್ಷಾಂ ಧೃತ್ವಾ ॥

ಬೃಹತ್ಸಾಮ ಕ್ಷತ್ರಭೃದ್ವೃದ್ಧವೃಷ್ಣಿಯಮ್ । ತ್ರಿಷ್ಟುಭೌಜಶ್ಶುಭಿತಮುಗ್ರ

ವೀರಮ್ । ಇಂದ್ರಸ್ತೋಮೇನ ಪಂಚದಶೇನ । ಮಧ್ಯಮಿದಂ ವಾತೇನ ಸಗರೇಣ ರಕ್ಷ ।

ಸ್ವಲಲಾಟೇ ಇತ್ಯಗ್ನಿರಕ್ಷಾಂ ಧೃತ್ವಾ । ಪತ್ನ್ಯಾಃ ಲಲಾಟೇ ಚ ಧಾರಯಿತ್ವಾ ॥

ಆಮೇಲೆ ಅಗ್ನಿಯ ಬಳಿಗೆ ಬಂದು ಅಗ್ನಿಯ ಪಕ್ಕದಲ್ಲಿ ಉತ್ತರದಲ್ಲಿಟ್ಟಿದ್ದ 2 ದರ್ಭೆಗಳ ಪವಿತ್ರವನ್ನು ಧರಿಸುವುದು. ಯಜ್ಞೇಶ್ವರನ ರಕ್ಷೆಯನ್ನು ಹೋಮ ಮಾಡಿದ ಸ್ರುವದಿಂದ ತೆಗೆದುಕೊಂಡು ಇಟ್ಟುಕೊಳ್ಳುವುದು. ತನ್ನ ಪತ್ನಿಗೂ ರಕ್ಷೆಯನ್ನು ಇಡುವುದು. (ಈ ರಕ್ಷೆಯು ಮುಖ್ಯಕರ್ತೃ ಹಾಗೂ ಆತನ ಪತ್ನಿಗೆ ಮಾತ್ರ).

ಗಚ್ಛ ಗಚ್ಛ ಸುರಶ್ರೇಷ್ಠ ಸ್ವಸ್ಥಾನಂ ಪರಮೇಶ್ವರ ।
ಯತ್ರ ಬ್ರಹ್ಮಾದಯೋ ದೇವಾಃ ತತ್ರ ಗಚ್ಛ ಹುತಾಶನ ॥

ಯಜ್ಞೇಶ್ವರಾಯ ನಮಃ ಯಥಾ ಸ್ಥಾನಂ ಪ್ರತಿಷ್ಠಾಪಯಾಮಿ । ಶೋಭನಾರ್ಥೇ ಕ್ಷೇಮಾಯ ಪುನರಾಗಮನಾಯ ಚ ॥

ಎರಡು ಅಂಗೈಗಳನ್ನೂ ಅಗ್ನಿಯಲ್ಲಿ ಕಾಯಿಸಿ ಕಣ್ಣಿಗೆ ಒತ್ತಿಕೊಂಡು ಅಗ್ನಿಯನ್ನು ವಿಸರ್ಜಿಸುವುದು. ಆಮೇಲೆ ಪವಿತ್ರವನ್ನು ಬಿಚ್ಚಿ ಹಾಕುವುದು.

ಇಲ್ಲಿಗೆ ಶ್ರಾದ್ಧ ಕರ್ಮ ಮುಗಿಯಿತು.

# ಪರೇऽಹನಿ ತರ್ಪಣಮ್

ಆಚಮ್ಯ । ಪವಿತ್ರಂ ಧೃತ್ವಾ ।

ನಂತರ ಪರೇऽಹನಿ ತರ್ಪಣಕ್ಕಾಗಿ ಆಚಮನ ಮಾಡಿ, ಸವ್ಯದಲ್ಲೇ ಇದ್ದುಕೊಂಡು ಮೂರು ದರ್ಭೆಗಳ ಪವಿತ್ರವನ್ನು ಧರಿಸುವುದು.

ಪ್ರಾಣಾನಾಯಮ್ಯ -

ಓಂ ಭೂಃ । ಓಂ ಭುವಃ । ಓಗ್ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಗ್ಂ ಸತ್ಯಮ್ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್ ॥

ಓಂ ಆಪೋ ಜ್ಯೋತೀರಸೋऽಮೃತಂ ಬ್ರಹ್ಮ ಭೂರ್ಭುವಸ್ಸುವರೋಮ್ ॥

ಶ್ರೀ ಗೋವಿಂದ ಗೋವಿಂದ ಗೋವಿಂದ ಶ್ರೀಮನ್ಮಹಾವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ ಚಾಂದ್ರಮಾನೇನ ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ ....... ನಾಮ ಸಂವತ್ಸರೇ ....... ಅಯನೇ ..... ಋತೌ ..... ಮಾಸೇ ...... ಪಕ್ಷೇ ....... ಪುಣ್ಯತಿಥೌ ...... ವಾಸರಯುಕ್ತಾಯಾಂ ವಿಷ್ಣುನಕ್ಷತ್ರ ವಿಷ್ಣುಯೋಗ ವಿಷ್ಣುಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಪುಣ್ಯತಿಥೌ ।

ಪ್ರಾಚೀನಾವೀತಿ ।

ಜನಿವಾರವನ್ನು ಎಡಕ್ಕೆ ಹಾಕಿಕೊಳ್ಳುವುದು.

ಮಮ ಪಿತುಃ (ಮಾತುಃ) ಪ್ರತಿ ಸಾಂವತ್ಸರೀಕ ಮೃತಾಹಾನ್ನ ಶ್ರಾದ್ಧೇ, ದೇಶ, ಕಾಲ, ದೇಹ ಧರ್ಮ ವೈಪರೀತ್ಯ ಶಂಕಯಾ, ಪರೇऽಹನಿ ಕರ್ತವ್ಯ, ಸದ್ಯಸ್ತಿಲ ತರ್ಪಣಂ ಕರಿಷ್ಯೇ ।

ದೇಶ, ಕಾಲ, ಶರೀರ ಧರ್ಮಾದಿಗಳ ಅಸ್ಥಿರತೆಯಿಂದ, ತಿಥಿಯ ದಿನದ ಮಾರನೆಯ ದಿನ, ಉಷಃ ಕಾಲದಲ್ಲಿ, ಮಾಡಬೇಕಾದ "ಪರೇऽಹನಿ" ತರ್ಪಣವನ್ನು, ಶ್ರಾದ್ಧಾನಂತರ, ಶ್ರಾದ್ಧದ ದಿನವೇ ಮಾಡುತ್ತೇನೆಂದು, ಸಂಕಲ್ಪ ಮಾಡುವುದು. (ಮಾರನೆಯ ದಿನ ಮಾಡುವುದು ಶ್ರೇಷ್ಠ).

# ಶ್ರೀ ವಿದ್ಯಾಗಣಪತಿ ಪ್ರಕಾಶನ

ತ್ಯಾಗರಾಜನಗರ, ಬೆಂಗಳೂರು - 28 ದೂ. : 62 85 42

## ನಮ್ಮ ಗ್ರಂಥಗಳ ವಿತರಕರು

1. ವೇದಾಂತ ಬುಕ್ ಹೌಸ್, ಚಾಮರಾಜಪೇಟೆ
2. ನ್ಯೂ ವೇದಾಂತ ಬುಕ್ ಹೌಸ್, ಮಲ್ಲೇಶ್ವರಂ
3. ಟಿ.ಎನ್. ಕೃಷ್ಣಯ್ಯಶೆಟ್ಟಿ ಅಂಡ್ ಸನ್ಸ್, ಚಿಕ್ಕಪೇಟೆ
4. ಗೀತಾಬುಕ್ ಪಬ್ಲಿಷರ್ಸ್, ಬಳೇಪೇಟೆ ಚೌಕ
5. ರಾಜಾರಾಮ್ ಬುಕ್ ಹೌಸ್, ಶೇಷಾದ್ರಿಪುರಂ
6. ಸಂಸ್ಕೃತಿ ಬುಕ್ ಹೌಸ್, ಚಾಮರಾಜಪೇಟೆ
7. ವಿಶ್ವವಿದ್ಯಾ ಮಾರ್ಕೆಟಿಂಗ್, ರಾಜಾಜಿನಗರ
8. ಸಾಹಿತ್ಯ ಸಿಂಧು ಪ್ರಕಾಶನ, ನೃಪತುಂಗ ರಸ್ತೆ, ಬೆಂಗಳೂರು
9. ವಂದನಾ ಬುಕ್ ಹೌಸ್, ಎನ್. ಆರ್. ಕಾಲೋನಿ
10. ಗೀತಾ ಬುಕ್ ಹೌಸ್, ಮೈಸೂರು
11. ಅತ್ರಿ ಬುಕ್ ಸೆಂಟರ್, ಮಂಗಳೂರು
12. ಸಾಹಿತ್ಯ ಕೇಂದ್ರ, ಮಂಗಳೂರು
13. ಶ್ರೀ ವಿದ್ಯಾಭಾರತಿ ಬುಕ್ ಹೌಸ್, ಶೃಂಗೇರಿ
14. ದಿ. ನ್ಯಾಷನಲ್ ಬುಕ್ ಹೌಸ್, ಉಡುಪಿ
15. ಶ್ರೀ ರಾಮಕೃಷ್ಣ ಮಠ, ಬೆಂಗಳೂರು
16. ಗೌರಿಶಂಕರ ಬುಕ್ ಡಿಪೋ, ಮೈಸೂರು
17. ಪ್ರಚೇತ ಬುಕ್ ಹೌಸ್, ಬುಲ್ ಟೆಂಪಲ್ ರಸ್ತೆ, ಬೆಂಗಳೂರು.

**ಹಾಗೂ ಇತರ ಧಾರ್ಮಿಕ ಪುಸ್ತಕ ವ್ಯಾಪಾರಿಗಳು**

# ನಮ್ಮ ಪ್ರಕಟಣೆಗಳು

| | |
|---|---|
| 1. ಶ್ರೀವಿಷ್ಣುಸಹಸ್ರನಾಮ | 10 ರೂ |
| 2. ಆದಿತ್ಯಹೃದಯ | 8 ರೂ |
| 3. ವ್ರತಮಂಜರಿ (ತಿದ್ದಿದ ಎರಡನೆಯ ಮುದ್ರಣ) | 80 ರೂ. |
| 4. ಶ್ರೀ ವಿದ್ಯಾತತ್ತ್ವ | 25 ರೂ. |
| 5. ಲಲಿತಾಮಹಿಮಾ | 10 ರೂ. |
| 6. ಬೆನಕ | 20 ರೂ. |
| 7. ಲಲಿತಾಸಹಸ್ರನಾಮ ಸ್ತೋತ್ರ (ದೇವಿ ಮಾನಸಿಕ ಪೂಜಾ ಸಹಿತ) | 6 ರೂ. |
| 8. ತಿರುಪ್ಪಾವೈ | 50 ರೂ. |
| 9. ಶ್ರೀಮದ್ಭಾಗವತ (8 ಸಂಪುಟಗಳು) (ಕನ್ನಡದಲ್ಲಿ ಮೂಲಶ್ಲೋಕ-ಪ್ರತಿಪದಾರ್ಥ-ಶ್ಲೋಕತಾತ್ಪರ್ಯ-ಟೀಕಾಸಹಿತ, 3400 ಪುಟಗಳು, ಕ್ರೌನ್ 1/4 ಆಕಾರ) | 1555 ರೂ. |
| 10. ತೈತ್ತಿರೀಯ ಆರಣ್ಯಕ | 100 ರೂ. |
| 11. ವಿಷ್ಣುಸಹಸ್ರನಾಮಸ್ತೋತ್ರ (ಜನತಾ ಪ್ರತಿ) | 5 ರೂ. |
| 12. ಗಣೇಶ ಸ್ತೋತ್ರಮಾಲಾ | 10 ರೂ. |
| 13. ಶ್ರೀಲಲಿತೋಪಾಖ್ಯಾನಂ | 180 ರೂ. |
| [illegible] | 20 ರೂ. |
| [illegible] ಬ್ರಾಹ್ಮಣ - ೧ | 50 ರೂ. |
| [illegible] ಬ್ರಾಹ್ಮಣ - ೨ | 50 ರೂ. |
| [illegible] ಬ್ರಾಹ್ಮಣ - ೩ | 80 ರೂ. |
| 18. ಶ್ರೀ ಲಲಿತಾನಾಮಚಕ್ರಪೂಜಾ | 30 ರೂ. |

ಬರಲಿವೆ :

ಯಾಜುಷಪೂರ್ವಪ್ರಯೋಗ,

ತ್ರಿಪುರಾ ರಹಸ್ಯ (4 ಸಂಪುಟಗಳು),

ದೇವೀ ಭಾಗವತ (12 ಸಂಪುಟಗಳು),

ಶಿವ ಮಹಾ ಪುರಾಣ (12 ಸಂಪುಟಗಳು)

Internet : http://www.culturalindia.com/vidyaganapathi